ಬಾಲವಾಚನಮಾಲಾ ಪುಷ್ಪ ೧ನೇದು

# ಶ್ರೀರಾಮಚರಿತ್ರ



…ಾಸದಿಂದ ಬಂದ ರಾಮನು ಭರತನನ್ನು ಕಾಣುವುದು. (ಪುಟ. ೩೫)

# ಶ್ರೀರಾಮಚರಿತ್ರ







೧೯೩೬ ]                [ ಬೆಲೆ ೦-೨-೬

# ವಿಜ್ಞಾಪನೆ

ಚಿಕ್ಕ ಮಕ್ಕಳಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸುವುದೇ ಈ ಮಾಲೆಯ ಉದ್ದೇಶವು. ಇದರಲ್ಲಿ ಅವರಿಗೆ ಉಪಯುಕ್ತವಾಗುವಂಥ ಅನೇಕ ವಿಷಯಗಳನ್ನು ಸಂಗ್ರಹಿಸಬೇಕೆಂಬ ವಿಚಾರವುಂಟು. ಎಲ್ಲಕ್ಕೂ ಮೊದಲು ಶ್ರೀರಾಮಚಂದ್ರನ ಮಾದರಿಯ ಜೀವನಚರಿತ್ರವು ತೆಗೆದು ಕೊಳ್ಳಲ್ಪಟ್ಟಿರುವುದು. ಯಾಕೆಂದರೆ ಶ್ರೀರಾಮನು ತಂದೆಯ ವಚನವನ್ನು ಕೊನೆಗಾಣಿಸುವದಕ್ಕಾಗಿ ಅರಣ್ಯವಾಸವನ್ನು ಕೈಕೊಂಡು ಹಲವು ಬಗೆಯ ಸ್ವಾರ್ಥತ್ಯಾಗವನ್ನು ಮಾಡಿ ಬಾಳುವೆಯ ಅನೇಕ ವಿಷಯಗಳಲ್ಲಿ ಹಿರಿಯರಿಗೂ ಕಿರಿಯರಿಗೂ ಮೇಲುಪಂಕ್ತಿಯನ್ನು ಹಾಕಿಕೊಟ್ಟಿರುವನು.

ಶಿಕ್ಷಕರೂ ತಾಯಿತಂದೆಗಳೂ ಮಕ್ಕಳಿಂದ ಈ ಪುಸ್ತಕವನ್ನು ಓದಿಸಿ ನಾವು ಕೈಕೊಂಡ ಕಾರ್ಯಕ್ಕೆ ಉತ್ತೇಜನ ಕೊಡುವಿರೆಂದು ನಂಬಿರುವ

ಧಾರವಾಡ,
೧ನೇ ಸಪ್ಟಂಬರ, ೧೯೩೬.

ಸಜ್ಜನ ವಿಧೇಯ,
ತ. ನಾ. ಅಮೀನಭಾವಿ,
ಕಾರ್ಯದರ್ಶಿ, ಬಾ. ವಾ. ಸಂಘ

ಶ್ರೀರಾಮ

ಒಂದು ಭಯಂಕರವಾದ ಅಡವಿ; ಗಿಡಗಳು ಒಂದ ರೊಳಗೊಂದು ಸಂದು ಬಿಡದೆ ಕೂಡಿ ಒಳ್ಳೇ ದಟ್ಟವಾಗಿ ಬೆಳೆದಿದ್ದವು. ಅಲ್ಲಿ ಮಧ್ಯಾಹ್ನದಲ್ಲಿ ಸಹ ಸೂರ್ಯನ ಕಿರಣಗಳ ಪ್ರವೇಶವಿದ್ದಿಲ್ಲ. ಕಾಡುಪಶುಗಳ ಭಯಂಕರವಾದ ಗರ್ಜನೆಯು ಹಗಲುರಾತ್ರಿ ಕೇಳಬರುತ್ತಿತ್ತು. ಇಂತಹ ಅಡವಿಯಲ್ಲಿ ಹಾವುಗಳಿಗೂ ಹೆಬ್ಬಾವುಗಳಿಗೂ ಕೊರತೆಯಿದ್ದಿಲ್ಲ.

ಇಂತಹ ಒಳ್ಳೇ ಭಯಾನಕವಾದ ಅರಣ್ಯದೊಳಗಿಂದ ಮೂವರು ದಾರಿಕಾರರು ಮಾರ್ಗಕ್ರಮಣ ಮಾಡುತ್ತ

ನಡೆದಿದ್ದರು. ಅವರಲ್ಲಿ ಒಬ್ಬನು ವಯೋವೃದ್ಧನಾದ ಋಷಿಯಂತೆ ಕಾಣುತ್ತಿದ್ದನು. ಅವನ ಬಿಳಿಯಬಣ್ಣದ ಗಡ್ಡಗಳು ಹೊಕ್ಕಳದವರೆಗೆ ಇಳಿಬಿದ್ದಿದ್ದವು. ಅವನು ಮೈಯಲ್ಲಿ ಒಂದು ಉದ್ದವಾದ ಕಫನಿಯನ್ನು ತೊಟ್ಟಿದ್ದನು. ಅವನ ಸಂಗಡ ಬೆಳೆದ ಕುಮಾರರು ಇದ್ದರು. ಅವರ ಹೆಗಲಿಗೆ ಬಿಲ್ಲುಬಾಣಗಳು ಜೋತಾಡುತ್ತಿದ್ದವು. ಅವರು ಬಹು ಎಚ್ಚರಿಕೆಯಿಂದ ತಮ್ಮ ದಾರಿಯನ್ನು ಕ್ರಮಿಸುತ್ತ ನಡೆದಿದ್ದರು.

“ಹೂಂ—ಊ—ಊ—ಊ” ಎಂದು ಒಮ್ಮೆಲೆ ಒಂದು ಭಯಂಕರವಾದ ಗರ್ಜನೆಯು ಅವರ ಕಿವಿಗೆ ಬಿತ್ತು. ಗುಡ್ಡದಲ್ಲಿ ಅದರ ಪ್ರತಿಧ್ವನಿಯು ಕೇಳಬರಲಾರಂಭಿಸಿತು. ಪಶುಪಕ್ಷಿಗಳು ಕ್ಷಣಹೊತ್ತು ಗಾಬರಿಯಾಗಿ ತಮ್ಮ ತಮ್ಮ ಸ್ಥಳದಲ್ಲಿ ಸುಮ್ಮನೆ ನಿಂತುಬಿಟ್ಟವು.

ದಾರಿಹಿಡಿದು ಹೋಗುತ್ತಿರುವ ಆ ಪ್ರವಾಸಿಗಳು ಆಶ್ಚರ್ಯದಿಂದ ಅತ್ತಿತ್ತ ನೋಡಲಾರಂಭಿಸಿದರು.

“ನಿಶ್ಚಯವಾಗಿ ಇದು ತಾಟಕೆಯ ಧ್ವನಿಯು !” ಎಂದು ಅವರೊಳಗಿನ ಮುಪ್ಪಿನ ಮನುಷ್ಯನು ಸೂಚನೆಯನ್ನುಮಾಡಿದನು.

ಕೂಡಲೆ ಆ ಇಬ್ಬರು ಕುಮಾರರು ಬಿಲ್ಲಿಗೆ ಹೆದೆಏರಿಸಿ ಬಾಣವನ್ನು ಹೂಡಿ ಸಜ್ಜಾಗಿ ನಿಂತರು.

" ಹೂಂ—ಊ—ಊ—ಊ " ಎಂದು ಪುನಃ ಅಡವಿಯು ನಡಗುವಂತೆ ಎದೆವಡೆಯುವಂತಹ ಗರ್ಜನೆಯು ಕೇಳಿಸಿತು. ಆ ಕುಮಾರಕರು ಬಿಲ್ಲಿಗೆ ಹೂಡಿದ ಬಾಣವನ್ನು ಬಿಟ್ಟುಬಿಟ್ಟರು. ನೋಡ ನೋಡುವಷ್ಟರಲ್ಲಿ ಬಾಣಗಳ ಮಳೆಯನ್ನೇ ಸುರಿಸಿದರು. ಮತ್ತು ಗುಡ್ಡದಂತಹ ವಿಶಾಲವಾದ ಒಂದು ಶರೀರವು ' ಧಪ್ ' ಎಂದು ಭೂಮಿಯಮೇಲೆ ಬಿದ್ದಿತು.

" ಶಾಬಾಶ್, ತಾಟಿಕೆಯನ್ನು ಕೊಂದ ವೀರರೇ, ಶಾಬಾಶ್ " ಎಂದು ಆ ಮುಪ್ಪಿನ ಮನುಷ್ಯನು ಆ ಕುಮಾರರ ಬೆನ್ನುಚಪ್ಪರಿಸಿದನು.

ಆ ಮುಪ್ಪಿನ ಮನುಷ್ಯನು, ವಿಶ್ವಾಮಿತ್ರಋಷಿಯು; ಮತ್ತು ತಾಟಿಕೆಯನ್ನು ಸಂಹರಿಸಿದ ಕುಮಾರರು, ಅಯೋಧ್ಯೆಯ ಅರಸನಾದ ದಶರಥಮಹಾರಾಜನ ರಾಮಲಕ್ಷ್ಮಣರೆಂಬ ಇಬ್ಬರು ಮಕ್ಕಳು.

ದಶರಥರಾಜನಿಗೆ ಮೂವರು ಹೆಂಡರಿದ್ದರು. ಕೌಸಲ್ಯಾ, ಕೈಕೇಯಿ, ಸುಮಿತ್ರಾ; ಅವರಲ್ಲಿ ರಾಮನು ಕೌಸಲ್ಯೆಯ ಮಗನು; ಲಕ್ಷ್ಮಣನು ಸುಮಿತ್ರೆಯ ಮಗನಾಗಿದ್ದನು. ಲಕ್ಷ್ಮಣನಿಗೆ ಶತ್ರುಘ್ನನೆಂಬ ಒಬ್ಬ ತಮ್ಮನು ಇದ್ದನು. ಕೈಕೇಯಿಯ ಹೊಟ್ಟೆಯಲ್ಲಿ ಭರತನೆಂಬ ಹೆಸರಿನ ಒಬ್ಬ ಮಗನಿದ್ದನು. ಇವರೆಲ್ಲರಲ್ಲಿ ರಾಮಲಕ್ಷ್ಮಣರು ಎಲ್ಲ

ಕೆಲಸಗಳಲ್ಲಿಯೂ ಮುಂದೆಯೇ ಇರುತ್ತಿದ್ದರು. ಅವರ
ಗುಣಗಳನ್ನು ಕೇಳಿಯೇ ವಿಶ್ವಾಮಿತ್ರಋಷಿಯು ಅಯೋ
ಧ್ಯೆಗೆ ಬಂದು ಅರಸನಿಂದ ಅವರನ್ನು ಪಡಕೊಂಡು ಮೇಲೆ
ಹೇಳಿದಂತೆ ತನ್ನ ಆಶ್ರಮಕ್ಕೆ ಹೊರಟಿದ್ದನು.

ವಿಶ್ವಾಮಿತ್ರಋಷಿಯು ಆ ಕಾಲಕ್ಕೆ ಅತ್ಯಂತ ಶೂರನಾ
ಗಿದ್ದನು. ಅವನಿಗೆ ಸರಿಯಾದವರು ಬೇರೊಬ್ಬರು ಇದ್ದಿಲ್ಲ.
ಅವನು ಮೊದಲು ಕ್ಷತ್ರಿಯ ರಾಜನಾಗಿದ್ದು ಶಸ್ತ್ರವಿದ್ಯೆಯಲ್ಲಿ
ಅಪಾರವಾದ ಜ್ಞಾನವನ್ನು ಸಂಪಾದಿಸಿದ್ದನು. ಮುಂದೆ ತಪ
ಸ್ಸುಮಾಡಿ ಬ್ರಹ್ಮರ್ಷಿಯೆಂದು ಹೆಸರು ಪಡೆದಿದ್ದನು. ಅವನು
ತನ್ನ ಆಶ್ರಮದಲ್ಲಿ ಒಂದು ಯಜ್ಞವನ್ನು ಪ್ರಾರಂಭಿಸಬೇ
ಕೆಂದು ಆಲೋಚನೆಯನ್ನು ಮಾಡಿದ್ದನು. ಆದರೆ ರಾಕ್ಷಸರು
ಆಗಾಗ್ಗೆ ಅಲ್ಲಿಗೆ ಬಂದು ಯಜ್ಞವನ್ನು ಕೆಡಿಸಲು ಯತ್ನ
ಮಾಡುತ್ತಿದ್ದರು. ಅವನು ಯಜ್ಞದೀಕ್ಷೆಯನ್ನು ತಕ್ಕೊಂಡಿ
ದ್ದುದರಿಂದ ಯಾರಸಂಗಡಲೂ ಯುದ್ಧವನ್ನು ಮಾಡುವುದು
ಶಕ್ಯವಿರಲಿಲ್ಲ. ಆದಕಾರಣ ರಾಮಲಕ್ಷ್ಮಣರನ್ನು ಅವರ
ಸಂಗಡ ಕಾದುವುದಕ್ಕಾಗಿ ಕರಕೊಂಡು ಹೊರಟಿದ್ದನು.
ಅವನು ಆ ಇಬ್ಬರು ರಾಜಕುಮಾರರಿಗೆ ದಾರಿಯಲ್ಲಿಯೇ
ಅಸ್ತ್ರವಿದ್ಯೆಯ ಜ್ಞಾನವನ್ನು ಮಾಡಿಕೊಟ್ಟನು.

ಎಷ್ಟೋ ಕಷ್ಟಕರವಾದ ದಾರಿಯನ್ನು ನಡೆದ
ಬಂದ ಬಳಿಕ ಅವರು ಆಶ್ರಮಕ್ಕೆ ಬಂದು ಮುಟ್ಟಿದರು.

ಮರುದಿವಸವೇ ಯಜ್ಞವು ಪ್ರಾರಂಭವಾಯಿತು. ಈ ಸುದ್ದಿಯನ್ನು ಕೇಳಿ ರಾಕ್ಷಸರು ಮೊದಲಿನಅಯ್ದು ದಿವಸಗಳ ವರೆಗೆ ಆ ಯಜ್ಞದ ಸಮೀಪಕ್ಕೆ ಬರಲಿಲ್ಲ. ಆರನೇ ದಿವಸ ದಿಂದ ಗುಂಪುಗೂಡಿ ಬಂದು ಯಜ್ಞರಕ್ಷಕರ ಮೇಲೆ ಬೀಳಲಾರಂಭಿಸಿದರು.

ರಾಮಲಕ್ಷ್ಮಣರು ಒಳ್ಳೇ ಪರಾಕ್ರಮದಿಂದ ಇದಿರಾಗಿ ಯುದ್ಧಮಾಡಿದರು. ಆ ಯುದ್ಧಗಳಲ್ಲಿ ಅಸಂಖ್ಯ ರಾಕ್ಷಸರು ಕೊಲ್ಲಲ್ಪಟ್ಟರು. ಋಷಿಗಳ ಯಜ್ಞವು ಸಮಾಪ್ತವಾಗಿ ಅವಭೃತಸಮಾರಂಭವು ನೆರವೇರಿತು. ವಿಶ್ವಾಮಿತ್ರರು ಉಭಯಕುಮಾರಕರ ಶೌರ್ಯವನ್ನು ಕಂಡು ಬಹಳ ಪ್ರಸನ್ನರಾದರು. ಆಗ ಅವರು— “ಇನ್ನು ನಾವು ಮಿಥಿಲಾಪಟ್ಟಣಕ್ಕೆ ಹೋಗೋಣ ನಡೆಯಿರಿ; ಅಲ್ಲಿ ಜನಕರಾಜನು ಒಂದು ದೊಡ್ಡ ಸಮಾರಂಭವನ್ನು ಮಾಡಲು ಉಪಕ್ರಮಿಸಿರುವನು. ಅದನ್ನು ನೋಡಲಿಕ್ಕೆ ಅನುಕೂಲ ವಾಗುವದು. ಇದಲ್ಲದೆ ಆ ರಾಜನ ಬಳಿಯಲ್ಲಿ ಆಶ್ಚರ್ಯ ಕರವಾದ, ಬಹು ಭಾರವಾದ ಒಂದು ಧನುಷವುಂಟು. ಅದನ್ನೂ ನೀವು ನೋಡಬಹುದು” ಅಂದರು.

ವಿಶ್ವಾಮಿತ್ರ ಋಷಿಗಳು ಮರುದಿವಸ ತಮ್ಮ ಸಂಗಡ ಎಷ್ಟೋ ಮುನಿಗಳನ್ನೂ ರಾಮಲಕ್ಷ್ಮಣರನ್ನೂ ಕರಕೊಂಡು, ಹೊರಟರು. ಸುಂದರವಾದ ಹಸರುಬಣ್ಣದಿಂದ ಶೋಭಿ

ಸುವ ಹೊಲಗಳನ್ನೂ ನಾಲ್ಕೂ ದಿಕ್ಕುಗಳಲ್ಲಿ ಉಲ್ಲಾಸದಿಂದ ಕುಣಿದಾಡುತ್ತಿರುವ ಚಿಗರಿಯ ಗುಂಪುಗಳನ್ನೂ ಸ್ವಚ್ಛವಾದ ನೀರಿನಿಂದ ತುಂಬಿ ಹರಿಯುವ ನದಿಗಳನ್ನೂ ನೋಡುತ್ತ ತಮ್ಮ ಸಂಗಡಿಗರೊಡನೆ ಮುಂದಕ್ಕೆ ಸಾಗಿದರು. ರಾಮಲಕ್ಷ್ಮಣರು ಸೃಷ್ಟಿಸೌಂದರ್ಯವನ್ನು ನೋಡುತ್ತಲೂ, ಅನೇಕ ವಿಧವಾದ ಚರ್ಚೆಗಳನ್ನು ಮಾಡುತ್ತಲೂ, ಎಲ್ಲರೊಡನೆಯೇ ನಡೆದಿದ್ದರು. ಮೊದಲನೆಯ ದಿವಸ ಶೋಣನದಿಯ ತೀರಕ್ಕೆ ಸೂರ್ಯನು ಮುಳುಗಿದ್ದರಿಂದ ಅಲ್ಲಿಯೇ ನದಿಯ ತೀರದಲ್ಲಿ ಹಸರು ಹುಲ್ಲಿನ ಮೇಲೆ ಮಲಗಿಕೊಂಡರು. ಮರುದಿವಸ ಭಾಗೀರಥೀ ನದಿಯ ಮನೋಹರವಾದ ದಂಡೆಯ ಮೇಲೆ ವಿಶ್ರಾಂತಿಯನ್ನು ಹೊಂದಿದರು. ತರುವಾಯ ಅವರು ಮುಂದಕ್ಕೆ ಸಾಗುತ್ತಿರಲು ಅಲಬೇಲಿ ಎಂಬ ವಿಶಾಲವಾದ ಪಟ್ಟಣವು ಬಂದಿತು. ಆ ಪಟ್ಟಣದ ಎತ್ತರವಾದ ಮಂದಿರಗಳ ಮೇಲಿನ ದೀಪಗಳು ಆಕಾಶದೊಳಗಿನ ತಾರಕೆಗಳಂತೆ ಶೋಭಿಸುತ್ತಿದ್ದವು. ಋಷಿಗಳೂ ಅವರ ಸಂಗಡ ಬಂದಿದ್ದ ಇತರ ಜನರ ಸಮುದಾಯವೂ ಇದನ್ನೆಲ್ಲ ಕಂಡು ಬಹಳ ಆನಂದಪಟ್ಟರು. ಅಲ್ಲಿ ಅವರು ಒಂದು ರಾತ್ರಿಯನ್ನು ಕಳೆದು, ಮುಂದಕ್ಕೆ ಹೊರಟರು ಈಗ ಅವರು ಅತ್ಯಂತ ಸುಂದರವಾದ ಮಿಥಿಲಾಪಟ್ಟಣವ ಸಮೀಪಕ್ಕೆ ಬಂದು

ತಲ್ಪಿದರು. ಈ ಪಟ್ಟಣವು ಜನಕಮಹಾರಾಜನ ರಾಜಧಾನಿಯಾಗಿತ್ತು. ಅವನು ಸದ್ಗುಣಸಂಪನ್ನನಾಗಿರುವದಲ್ಲದೆ ಧರ್ಮಪರಾಯಣನೂ ಆಗಿದ್ದನು; ಮತ್ತು ಜ್ಞಾನಿಯೆಂದು ಸ್ವದೇಶದಲ್ಲಿಯೂ ವಿದೇಶಗಳಲ್ಲಿಯೂ ಹೆಸರು ಪಡೆದಿದ್ದನು.

ಜನಕರಾಜನಿಗೆ ವಿಶ್ವಾಮಿತ್ರ ಋಷಿಗಳು ಬಂದ ಸುದ್ದಿಯು ಗೊತ್ತಾಯಿತು. ಕೂಡಲೆ ಅವನು ಅವರಿಗೆ ಬಹಳ ಆದರಾತಿಥ್ಯಗಳನ್ನು ಮಾಡಿದನು. ಋಷಿಗಳು ಆತನಿಗೆ ರಾಮಲಕ್ಷ್ಮಣರನ್ನು ತೋರಿಸಿ ಅವರ ಕುಲ-ಶೀಲ ಮೊದಲಾದವುಗಳನ್ನು ಗೊತ್ತು ಮಾಡಿಕೊಟ್ಟರು. ಮತ್ತು ನಿನ್ನಲ್ಲಿರುವ ಶಂಕರನ ಬಲವಾದ ಬಿಲ್ಲನ್ನು ನೋಡಬೇಕೆಂದು ಈ ರಾಮಲಕ್ಷ್ಮಣರ ಇಚ್ಛೆಯುಂಟೆಂದು ಹೇಳಿದರು. ಆಗ ಜನಕಮಹಾರಾಜನು–ಋಷಿವರ್ಯರೇ, ಅದಕ್ಕಿಂತ ಮೊದಲು ಈ ಬಿಲ್ಲಿನ ಪೂರ್ವೇತಿಹಾಸವನ್ನು ಹೇಳುತ್ತೇನೆ ಕೇಳಬೇಕು.

“ಇದು ಶಿವನ ಬಿಲ್ಲು; ಇದು ಬಹಳ ಭಾರವಾದದ್ದಿರುವದು. ಇದನ್ನು ಶಿವನೇ ನಮ್ಮ ಪೂರ್ವಜರ ವಶಕ್ಕೆ ಕೊಟ್ಟಿದ್ದಾನೆ. ಅಂದಿನಿಂದ ಇದು ನಮ್ಮ ಮನೆಯಲ್ಲಿ ಅದೆ. ನಾನು ಯಜ್ಞಭೂಮಿಯನ್ನು ಹರಗುತ್ತಿರುವಾಗ ನನಗೆ ಒಬ್ಬ ಚಲುವೆಯಾದ ಕನ್ನಿಕೆಯು ದೊರಿ

ತ್ರಳು. ಅವಳ ಹೆಸರು ಸೀತಾ. ಆಕೆಯು ಬೆಳೆದು ಮದುವೆಗೆ ತಕ್ಕವಳಾಗಲು ಅವಳನ್ನು ಯಾರಿಗೆ ಕೊಡಬೇಕೆಂದು ಆಲೋಚನೆಯನ್ನು ಮಾಡಲಾರಂಭಿಸಿದೆನು. ಕಡೆಗೆ ನಾನು ಈ ಶಿವಧನುಸ್ಸನ್ನು ಎತ್ತಿ ಯಾರು ಇದಕ್ಕೆ ಹೆದೆ ಏರಿಸುವರೋ ಅವರಿಗೆ ಅವಳನ್ನು ಕೊಡಬೇಕೆಂದು ನಿಶ್ಚಯಿಸಿದೆನು. ಅನೇಕರು ಇದನ್ನು ಎತ್ತಲು ಪ್ರಯತ್ನಮಾಡಿದರು. ಆದರೆ ಯಾರಿಗೂ ಸಾಧ್ಯವಾಗಲಿಲ್ಲ." ಎಂದು ಹೇಳಿ ಆ ಬಿಲ್ಲನ್ನು ತರಲಿಕ್ಕೆ ಮಂತ್ರಿಗೆ ಅಪ್ಪಣೆಯನ್ನು ಕೊಟ್ಟನು.

ಅದು ಎಂಟುಗಾಲಿಗಳುಳ್ಳ ಒಂದು ದೊಡ್ಡ ಪೆಟ್ಟಿಗೆಯಲ್ಲಿ ಇಡಲ್ಪಟ್ಟಿತ್ತು. ಅಯ್ದುಸಾವಿರಮಂದಿ ಕೂಲಿಕಾರರು ಆ ಪೆಟ್ಟಿಗೆಯನ್ನು ಎಳೆದು ತಂದರು. ಪೆಟ್ಟಿಗೆಯ ಮುಚ್ಚಳವನ್ನು ತೆರೆಯಲು ರಾಮಲಕ್ಷ್ಮಣರು ಅದರೊಳಗಿನ ಬಿಲ್ಲನ್ನು ನೋಡಿದರು. ಶ್ರೀರಾಮನು ಕೂಡಲೆ ಆ ಬಿಲ್ಲನ್ನು ಸಹಜವಾಗಿ ಎಡಗೈಯಿಂದ ಎತ್ತಿ ಬಲಗೈಯಿಂದ ಅದಕ್ಕೆ ಹಗ್ಗವನ್ನು ಕಟ್ಟಿ ಜಗ್ಗಲು, ಅದು ಮುರಿದು ಎರಡು ತುಂಡಾಯಿತು. ಆಗ ಬಹು ದೊಡ್ಡ ಸಪ್ಪಳವಾಯಿತು. ಅದನ್ನು ಕೇಳಿ ಎಲ್ಲರ ಕಿವಿಗಳು ಗಡಚಿಕ್ಕಿದವು. ಕೂಡಲೆ ಸೀತಾದೇವಿಯು ಶ್ರೀರಾಮನಿಗೆ ಮಾಲೆಯನ್ನು ಹಾಕಿದಳು. ಇದನ್ನು ಕಂಡು ಜನಕರಾಜನಿಗೆ ಬಹಳ ಆನಂದವಾಯಿತು.

ಅವನು ಶ್ರೀರಾಮಚಂದ್ರನ ಗುರುಹಿರಿಯರನ್ನೂ ಆಪ್ತ ಪರಿವಾರವನ್ನೂ ಕರಕೊಂಡು ಬರುವದಕ್ಕಾಗಿ ಅಯೋಧ್ಯೆಗೆ ದೂತರನ್ನು ಕಳಿಸಿದನು. ಕೊಂಚಕಾಲದಲ್ಲಿಯೇ ದಶರಥ ಮಹಾರಾಜನೂ, ಕುಲಗುರುಗಳಾದ ವಶಿಷ್ಠ ಮಹಾಮುನಿಗಳೂ, ಬೇರೆ ಪರಿವಾರದವರೂ ಅಲ್ಲಿಗೆ ಬಂದರು. ಮಿಥಿಲಾ ಪಟ್ಟಣದಲ್ಲಿ ಬಹುದೊಡ್ಡ ಉತ್ಸವವು ಪ್ರಾರಂಭವಾಯಿತು. ಲಕ್ಷ್ಮಣ-ಭರತ-ಶತ್ರುಘ್ನರಿಗೂ ಒಂದೊಂದು ಕನ್ನಿಕೆಯನ್ನು ಕೊಡುವುದು ನಿಶ್ಚಯವಾಯಿತು. ಲಕ್ಷ್ಮಣನಿಗೆ ಸೀತೆಯ ತಂಗಿಯಾದ ಊರ್ಮಿಲೆಯನ್ನೂ ಭರತ ಶತ್ರುಘ್ನರಿಗೆ ಜನಕರಾಜನ ತಮ್ಮನ ಮಕ್ಕಳಾದ ಮಾಂಡವಿ-ಶ್ರುತಿಕೀರ್ತಿಯರನ್ನೂ ಕೊಡುವುದು ಗೊತ್ತಾಯಿತು.

ಹೀಗೆ ಆ ನಾಲ್ಕುಮಂದಿ ಬಂಧುಗಳ ಮದುವೆಯ ಸಮಾರಂಭವು ಒಳ್ಳೇ ವಿಜೃಂಭಣೆಯಿಂದ ನೆರವೇರಿತು.

ವಿಶ್ವಾಮಿತ್ರ ಋಷಿಗಳು ಮರುದಿವಸ ಹಿಮಾಲಯಕ್ಕೆ ತೆರಳಿದರು. ದಶರಥಮಹಾರಾಜನು ತನ್ನ ನಾಲ್ಕುಮಂದಿ ಮಕ್ಕಳನ್ನೂ ಅವರ ವಧುಗಳನ್ನೂ ಕರಕೊಂಡು ಎಲ್ಲ ಪರಿವಾರದೊಂದಿಗೆ ಅಯೋಧ್ಯೆಗೆ ತಿರುಗಿ ಹೊರಟನು.

ದಾರಿಯಲ್ಲಿ ಅವರು, ನೋಡಿದರೆ ಹೆದರಿಕೆ ಬರುವಂತಹ ಒಬ್ಬ ಮನುಷ್ಯನನ್ನು ಕಂಡರು. ಗುಡ್ಡದಂತಹ ದೊಡ್ಡ ಶರೀರ, ಅಗ್ನಿಯಂತೆ ಹೊಳೆಯುವ ಕಣ್ಣುಗಳು,

ಹೆಗಲಿಗೆ ಬಿಲ್ಲು, ಕಯ್ಯಲ್ಲಿ ಬಲವಾದ ಕೊಡಲಿ, ಕೊರಳೊಳಗೆ ಜನಿವಾರ, ಇವೆಲ್ಲವುಗಳಿಂದ ಅವನು ಕ್ಷತ್ರಿಯ ಜಾತಿಗೆ ಕಡುಹಗೆಯಾದ ಪರಶುರಾಮನೆಂಬುದು ಸಹಜ ವಾಗಿ ತಿಳಿಯುವಂತಿತ್ತು.

ಪರಶುರಾಮನು ಜಾತಿಯಿಂದ ಬ್ರಾಹ್ಮಣನು. ಅವನ ತಂದೆಯನ್ನು ಒಬ್ಬ ಕ್ಷತ್ರಿಯ ರಾಜನು ಕೊಂದಿದ್ದನು. ಆದುದರಿಂದ ಕ್ಷತ್ರಿಯರ ವಿಷಯವಾಗಿ ಅವನಲ್ಲಿ ಹಗೆತನ ವಿತ್ತು. ಯಾವನೊಬ್ಬ ಕ್ಷತ್ರಿಯನನ್ನು ಕಂಡಕೂಡಲೆ ಅವನು ಅವನನ್ನು ಕೊಂದುಹಾಕುತ್ತಿದ್ದನು. ಅವನು ಇಪ್ಪತ್ತೊಂದು ಸಾರಿ ಈ ಭೂಮಿಯಮೇಲಿನ ಕ್ಷತ್ರಿಯರ ನ್ನೆಲ್ಲ ನಾಶಮಾಡಬೇಕೆಂದು ನಿಶ್ಚಯಿಸಿದ್ದನು. ಅವನು ಈಗ ರಾಮನಿಗೆ ಇದಿರಾಗಿ– " ನೀನು ನಿಜವಾದ ಕ್ಷತ್ರಿಯ ನಾಗಿದ್ದರೆ ಈ ಬಿಲ್ಲಿಗೆ ಹೆದೆ ಏರಿಸಿ ಬಾಣವನ್ನು ಹೂಡು" ಎಂದು ಹೇಳಿದನು. ಆ ಬಿಲ್ಲು ಕೂಡ ಬಹಳ ಬಲವಾದ ದ್ದಿತ್ತು. ಆದರೆ ರಾಮನಿಗೆ ಅದರ ಮಹತ್ವವೇನು? ಅವನು ಅದನ್ನು ನೋಡನೋಡುವಷ್ಟರಲ್ಲಿ ಎತ್ತಿ ಹೆದೆ ಏರಿಸಿ ಬಾಣವನ್ನು ಹೂಡಿದನು. ಆಗ ಪರಶುರಾಮನು ತಣ್ಣ ಗಾದನು. ಅವನ ಮನಸಿನೊಳಗಿನ ಸಂಕಲ್ಪವು ಮನಸಿ ನಲ್ಲಿಯೇ ಉಳಿಯಿತು. ಆ ಬಳಿಕ ಅವನು ಎಲ್ಲಿಯೊ ತಪಶ್ಚರ್ಯಕ್ಕಾಗಿ ಹೊರಟುಹೋದನು. ಇತ್ತ ನಿಬ್ಬಣ ದವರೆಲ್ಲರೂ ಅಯೋಧ್ಯೆಗೆ ಬಂದು ತಲುಪಿದರು.

## II

ಚೈತ್ರಮಾಸ; ವಸಂತ ಋತುವಿನ ಬರುವಿಕೆಯು ಪಟ್ಟಣದ ಸಮೀಪದ ತೋಟಗಳಲ್ಲಿ ಒಡೆದುಕಾಣುತ್ತಿತ್ತು. ಪ್ರತಿಒಂದು ವೃಕ್ಷದಲ್ಲಿ ಚಿಗರೆಲೆಗಳು ದೃಷ್ಟಿಗೋಚರ ವಾಗುತ್ತಿದ್ದುವು. ಸಣ್ಣದೊಡ್ಡ ಗಿಡಗಳಲ್ಲಿ ಹೂಗಳ ಗೊಂಚಲುಗಳು ತೋಟಕ್ಕೆ ಶೋಭೆಯನ್ನುಂಟು ಮಾಡು ತ್ತಿದ್ದುವು.

ಒಂದಾನೊಂದು ದಿವಸ ದಶರಥಮಹಾರಾಜನು ಕನ್ನಡಿಯ ಮಂದಿರದಲ್ಲಿ ಕುಳಿತಿರುವಾಗ ತನ್ನ ತಲೆಯ ಮೇಲೆ ಬಿಳಿಯ ಕೂದಲುಗಳನ್ನು ಕಂಡನು. ಆಗ ಅವನು ಮನಸಿನಲ್ಲಿ "ಇನ್ನು, ನಾನು ನನ್ನ ತಲೆಯಮೇಲಿನ ರಾಜ್ಯದ ಹೊರೆಯನ್ನು ಇಳಿಸಿ ಈಶಚಿಂತನೆಯಲ್ಲಿಯೇ ಕಾಲವನ್ನು ಕಳೆಯುವುದು ತಕ್ಕದ್ದು. ನನ್ನ ರಾಮನು ರಾಜ್ಯದ ಹೊರೆಯನ್ನು ಹೊರಲಿಕ್ಕೆ ಈಗ ತಕ್ಕವನಾಗಿ ದ್ದಾನೆ. ಆತನಿಗೆ ರಾಜ್ಯವನ್ನು ಒಪ್ಪಿಸುವುದು ಲೇಸು" ಎಂದು ಆಲೋಚನೆಮಾಡಲಾರಂಭಿಸಿದನು. ಕೂಡಲೆ ಅವನು ತನ್ನ ಮಂತ್ರಿಸಭಾಸದರನ್ನು ಕರೆಯಿಸಿ ಅವರೆಲ್ಲರ ಸಂಗಡ ಬಹಳ ಆಲೋಚನೆಯನ್ನು ಮಾಡಿದನು. ಅವರೆಲ್ಲರು ಒಮ್ಮನಸಿನಿಂದ ಶ್ರೀರಾಮನಿಗೆ ಪಟ್ಟಾಭಿಷೇಕ ವನ್ನು ಮಾಡುವುದಕ್ಕೆ ಒಪ್ಪಿದರು. ರಾಜ್ಯಾಭಿಷೇಕದ ಶುಭ

ಮುಹೂರ್ತವು ಗೊತ್ತಾಯಿತು. ಈ ಸುದ್ದಿಯು ಕೂಡಲೆ ನಾಲ್ಕು ಕಡೆಗೆ ಹಬ್ಬಿತು. ಅಯೋಧ್ಯೆಯ ನಿವಾಸಿಗಳು ಇದನ್ನು ಕೇಳಿ ಆನಂದಸಾಗರದಲ್ಲಿ ಮುಳುಗಿದರು.

ಜನರು ತಮ್ಮ ತಮ್ಮ ಮನೆಗಳನ್ನು ಶ್ರಿಂಗರಿಸ ತೊಡಗಿದರು. ರಾಜಮಾರ್ಗಗಳ ಮೇಲೆ ಪನ್ನೀರುಗಳ ಥಳಿಯನ್ನು ಹಾಕಿದರು. ಎಲ್ಲಕಡೆಗೂ ವಾದ್ಯ ಗಾಯನಗಳ ಧ್ವನಿಯು ಕೇಳಬರಲಾರಂಭಿಸಿತು.

ಇಂಥ ಆನಂದದ ಸಮಯದಲ್ಲಿ ಒಬ್ಬ ಡೂಗು ಹಾಯ್ದ ಸ್ತ್ರೀಯು ಮುಂದೆ ಬಂದು ಈ ಸಮಾರಂಭದ ಕಾರಣವನ್ನು ಕೇಳಿ ಅವಸರವಸರದಿಂದ ಕೈಕೇಯಿಯ ಅರಮನೆಗೆ ಹೊರಟಳು. ಅವಳ ತುಟಿಗಳು ಉದ್ದವಾಗಿಯೂ, ಕೈಗಳು ಗಿಡ್ಡವಾಗಿಯೂ ಮೂಗು ಚಪ್ಪಟೆಯಾಗಿಯೂ ಇದ್ದವು. ಈ ಹೆಂಗಸು ಕೈಕೇಯಿ ರಾಣಿಯ ದಾಸಿಯು. ಅವಳ ಹೆಸರು ಮಂಥರೆ. ಅವಳು ರಾಣಿಯನ್ನು ಕಂಡು ಅಂದಳು:—

"ಮಹಾರಾಣಿಯವರೆ, ಊರಲ್ಲಿ ಏನು ನಡೆದಿದೆ ಎಂಬುದನ್ನು ಕೇಳಿದ್ದೀರಾ?"

"ಅಹುದು, ಕೇಳಿದ್ದೇನೆ. ಶ್ರೀರಾಮನು ನಾಳಿನ ದಿವಸ ಪಟ್ಟದಮೇಲೆ ಕೂಡುವನು" ಎಂದು ಕೈಕೇಯಿಯು ನಗುತ್ತ ಉತ್ತರವನ್ನು ಕೊಟ್ಟಳು.

" ರಾಣಿಯವರೆ, ಏನು, ಸುಮ್ಮನೆ ನಕ್ಕರೇನಾಯಿತು? ಈ ವಿಷಯಕ್ಕೆ ನೀವೇನಾದರೂ ವಿಚಾರಮಾಡಿರುವಿರಾ? ರಾಮನು ಪಟ್ಟದ ಮೇಲೆ ಕೂಡುವನು, ಆ ಮೇಲೆ ಭರತನು ಏನುಮಾಡುವನು? ಛತ್ರವನ್ನು ಹಿಡಿಯುವನೊ, ಚಾಮರವನ್ನು ಬೀಸುವನೋ? ಎಂದು ಮಂಥರೆಯು ಪ್ರಶ್ನಮಾಡಿ ರಾಣಿಯನ್ನು ಒಳ್ಳೇ ತೀಕ್ಷ್ಣ ದೃಷ್ಟಿಯಿಂದ ನೋಡುತ್ತ ನಿಂತಳು.

ಸರಳ ಮನಸಿನ ಕೈಕೇಯಿಯ ರಾಣಿಯ ಬುದ್ಧಿಯು ಭ್ರಮಿಸಿತು. ಮಂಥರೆಯು ಮತ್ತೂ ಅನೇಕ ಸಂಗತಿಗಳನ್ನು ಹೇಳಿ ಅವಳ ಮನಸ್ಸನ್ನು ಸಂಪೂರ್ಣವಾಗಿ ಕೆಡಸಿದಳು. ಆಗ ಕೈಕೇಯಿಯ ಮನಸ್ಸಿನಲ್ಲಿ—" ರಾಮನು ಪಟ್ಟದ ಮೇಲೆ ಕುಳಿತ್ತರೆ ಕೌಸಲ್ಯೆಯು ರಾಜಮಾತೆಯಾಗುವಳು, ಇದು ಯೋಗ್ಯವಾಗುವದಿಲ್ಲ." ಈ ವಿಚಾರವು ತಲೆದೋರಿತು.



ಕೂಡಲೆ ಅವಳು ಅಂದು ಸಾಯಂಕಾಲ ಅರಮನೆಯೊಳಗಿನ ದೀಪಗಳನ್ನೆಲ್ಲ ಆರಿಸಿ ವಸ್ತ್ರಗಳನ್ನು ಅಸ್ತವ್ಯಸ್ತವಾಗಿ ಚಲ್ಲಿಕೊಟ್ಟು, ಅಲಂಕಾರಗಳನ್ನು ಮುರಿದು ಬಿಸಾಡಿ ಒಂದು ಮುರಕ ಮಂಚದ ಮೇಲೆ ಮಲಗಿಬಿಟ್ಟಿದ್ದಳು. ದಶರಥ ಮಹಾರಾಜನು ಅಲ್ಲಿಗೆ ಬಂದು ನೋಡುತ್ತಾನೆ. ಎತ್ತ ನೋಡಿದರೂ ಸಾಮಸೂಮು ಕತ್ತಲೆ;

ರಾಣಿಯ ಮಂಚದ ಹತ್ತಿರ ಒಂದು ಸಣ್ಣ ದೀಪವು ಮಾತ್ರ ಮಿನುಗುತ್ತಿತ್ತು.

ಆಗ ಮಹಾರಾಜನು ಕೈಕೇಯಿ ರಾಣಿಗೆ ಇದರ ಕಾರಣವನ್ನು ಕೇಳಲು, ಕೈಕೇಯಿಯು— " ನನಗೆ ಹಿಂದಕ್ಕೆ ಕೊಟ್ಟ ಎರಡು ವರಗಳನ್ನು ಈಗ ಬೇಡಿಕೊಳ್ಳಲಿಕ್ಕೆ ಅಪ್ಪಣೆಯಾಗಬೇಕೆಂ"ದಳು.

ಹಿಂದಕ್ಕೆ ಯಾವದೋ ಒಂದು ಯುದ್ಧ ಪ್ರಸಂಗದಲ್ಲಿ ಕೈಕೇಯಿಯು ದಶರಥ ಮಹಾರಾಜನ ಸಾರಥಿಯಾಗಿ ಕೆಲಸ ಮಾಡಿ ಆತನಿಗೆ ವಿಜಯವನ್ನು ದೊರಕಿಸಿ ಕೊಟ್ಟಿದ್ದಳು. ಆ ಕಾಲಕ್ಕೆ ಅರಸನು ಅವಳಿಗೆ ಎರಡು ವರಗಳನ್ನು ಕೊಡಲಿಕ್ಕೆ ಒಪ್ಪಿದ್ದನು.

" ಬೇಡು, ಬೇಡು, ಕೊಡಲಿಕ್ಕೆ ನಾನೆಲ್ಲಿ ಒಲ್ಲೆನೆನ್ನುತ್ತೇನೆ. " ಎಂದು ದಶರಥರಾಜನು ಶುದ್ಧ ಮನಸ್ಸಿನಿಂದ ನುಡಿದನು.

ಆಗ ಕೈಕೇಯಿಯು—ಸಿಟ್ಟಿನಿಂದ ' ಭರತನು ಪಟ್ಟದ ಮೇಲೆ ಕೂಡತಕ್ಕದ್ದು; ಇದು ನನ್ನ ಮೊದಲನೆಯ ಬೇಡಿಕೆಯು; ರಾಮನು ಹದಿನಾಲ್ಕುವರ್ಷ ವನವಾಸಕ್ಕೆ ಹೋಗತಕ್ಕದ್ದು; ಇದು ಎರಡನೆಯದು. ಎಂದು ನಿಷ್ಠುರ ವಚನಗಳನ್ನಾಡಿದಳು.

ಈ ಮಾತುಗಳನ್ನು ಕೇಳಿ ತಲೆಯಮೇಲೆ ಸಿಡಿಲು ಬಿದ್ದಂತೆ ದಶರಥ ಮಹಾರಾಜನ ಅವಸ್ಥೆಯಾಯಿತು. ಅವನ ಬಾಯಿಂದ ಮಾತುಗಳೇ ಹೊರಡದಾದವು. ಆಗ ಮಹಾರಾಜನು ಕೈಕೇಯಿಯನ್ನು ಬೇರೆ ಏನಾದರೂ ಬೇಡಿ ಕೊಳ್ಳುವ ವಿಷಯದಲ್ಲಿ ಪ್ರಾರ್ಥಿಸಿದನು. ಆದರೆ ಅವಳು ಒಪ್ಪುವಳೆ? ಮಹಾರಾಜನಿಗೆ ಅತ್ಯಂತ ದುಃಖವಾಯಿತು.

ರಾತ್ರಿಯು ದುಃಖದಲ್ಲಿಯೇ ಕಳೆದುಹೋಯಿತು. ಬೆಳಗಾಗುತ್ತಲೆ ವಶಿಷ್ಠ ಮಹರ್ಷಿಗಳು ಪಟ್ಟಾಭಿಷೇಕದ ಸಿದ್ಧತೆಯನ್ನು ಮಾಡಲಾರಂಭಿಸಿದರು. ಶ್ರೀರಾಮನು ಒಳ್ಳೇ ಬೆಳಗಿನಲ್ಲಿ ಎದ್ದು ಕೌಸಲ್ಯಾಮಾತೆಗೆ ನಮಸ್ಕರಿಸಿ ಸಿದ್ಧನಾಗಿ ತಂದೆಯ ಬಳಿಗೆ ಹೊರಟನು. ಮಹಾರಾಜನು ಚಿಂತೆಯಿಂದ ಅತ್ಯಂತ ವ್ಯಾಕುಲನಾದದ್ದನ್ನು ಕಂಡು ಸ್ತಬ್ಧನಾಗಿ ಬಿಟ್ಟನು. ರಾಮನು ತಂದೆಯ ಪಾದವನ್ನು ಮುಟ್ಟಿ ನಮಸ್ಕರಿಸಿದನು. ಆದರೆ ದಶರಥ ಮಹಾ ರಾಜರು ಕಣ್ಣೀರು ಸುರಿಸಿದರಲ್ಲದೆ ಅವರ ಬಾಯಿಂದ ಒಂದು ಚಕಾರ ಶಬ್ದವು ಕೂಡ ಹೊರಡಲಿಲ್ಲ. ಆಗ ಶ್ರೀರಾಮನು ತಾಯಿಯಾದ ಕೈಕೇಯಿಗೆ ಕಾರಣವನ್ನು ಕೇಳಿದನು.

“ ರಾಮಾ, ನಿನ್ನ ತಂದೆಯವರು ನಿನಗೆ ಉತ್ತರ ವನ್ನು ಕೊಡುವಂತೆ ಇಲ್ಲ. ನೀನು ಹದಿನಾಲ್ಕು

ವರುಷ ವನವಾಸಕ್ಕೆ ಹೋಗಬೇಕೆಂತಲೂ, ಭರತನನ್ನು ಪಟ್ಟದ ಮೇಲೆ ಕುಳ್ಳಿರಿಸಬೇಕೆಂತಲೂ ನನಗೆ ವಚನವನ್ನು ಕೊಟ್ಟುಬಿಟ್ಟಿರುವರು.”

“ ತಾಯಿಯವರೆ, ನನ್ನ ತಂದೆಯವರು ವಚನ ಕೊಟ್ಟಮೇಲೆ ಆಯಿತು. ಮತ್ತು ಅವರ ಅಪ್ಪಣೆಯು ಹಾಗಿದ್ದಮೇಲೆ ಅದನ್ನು ತಲೆಯಲ್ಲಿ ಹೊತ್ತು ನಡೆಯಿಸುವದು ನನ್ನ ಕರ್ತವ್ಯವು.”

ಹೀಗೆಂದು ಹೇಳಿ ಶ್ರೀರಾಮನು ವನಕ್ಕೆ ಹೋಗಲು ಸಿದ್ಧನಾದನು. ಕೂಡಲೆ ಈ ಸುದ್ದಿಯು ವಾಯುವೇಗದಿಂದ ಪಟ್ಟಣದತುಂಬ ಹಬ್ಬಿತು. ಆನಂದದ ಉತ್ಸವಗಳೆಲ್ಲ ಅಷ್ಟಕ್ಕೇ ಉಳಿದು ಜನರು ಶೋಕಸಾಗರದಲ್ಲಿ ಮುಳುಗಿದರು. ಕೌಸಲ್ಯಾ ರಾಣಿಯು ಎದೆಗರಗುವಂತೆ ಹಂಬಲಿಸಿ ಹಲುಬಿದಳು.

ಶ್ರೀರಾಮನು ವನಕ್ಕೆ ಹೋಗುವಮುಂಚೆ ಸೀತಾ-ದೇವಿಯನ್ನು ಕಾಣಲು ಹೊರಟನು. ಆದರೆ ಅವಳು ತಾನೂ ಸಂಗಡ ಬರುವೆನೆಂದು ಹಟ ಹಿಡಿದಳು. ರಾಮನು ಅವಳಿಗೆ ವನದಲ್ಲಿ ಆಗುವ ಕಷ್ಟಗಳನ್ನು ಪರಿಪರಿಯಿಂದ ತಿಳಿಸಿಹೇಳಿದನು. ಆದರೆ ಸೀತಾದೇವಿಯು– ‘ ಮೀನವು ನೀರಿಲ್ಲದೆ ಎಂದೂ ಬದುಕಲಾರದು. ಈ ಪಾದಗಳು ಇರುವಲ್ಲಿ ಭಯಂಕರವಾದ ಕಾಡು ಇದ್ದರೂ

ಅದು ನನಗೆ ಸುಂದರವಾದ ನಾಡಿನಂತೆ ಆಗುವದು. ಎಂದಳು. ಕೌಸಲ್ಯಾದೇವಿಯೂ ಅವಳಿಗೆ ಬಹಳ ಬಗೆಯಿಂದ ತಿಳಿಸಿ ಹೇಳಿದಳು. ಆದರೆ ಅವಳು ಎಷ್ಟು ಮಾತ್ರಕ್ಕೂ ಒಪ್ಪಲಿಲ್ಲ.

ಆ ಬಳಿಕ ಶ್ರೀರಾಮನು ಲಕ್ಷ್ಮಣನ ಅಪ್ಪಣೆಯನ್ನು ಪಡಕೊಳ್ಳುವುದಕ್ಕೆ ಹೊರಟನು. ರಾಮಲಕ್ಷ್ಮಣರ ಸ್ನೇಹವು ಹಾಲು ನೀರುಗಳ ಮಿಶ್ರಣದಂತೆ ಇತ್ತು. ಆಗ ಲಕ್ಷ್ಮಣನು ಅಂದದ್ದು :–

“ಶ್ರೀರಾಮನು ಕಾಡಿಗೆ ಹೋಗುವದು, ಲಕ್ಷ್ಮಣನು ಅರಮನೆಯಲ್ಲಿ ವಾಸಿಸುವುದು ಶಕ್ಯವೇ ಇಲ್ಲ”.

ಮರುದಿವಸ ಶ್ರೀರಾಮ, ಸೀತಾದೇವಿ, ವೀರನಾದ ಲಕ್ಷ್ಮಣ ವನವಾಸಕ್ಕೆ ಹೋಗಲು ಹೊರಟರು. ಆ ಕಾಲಕ್ಕೆ ಅವರು ನಾರುಬಟ್ಟೆಗಳನ್ನು ಧರಿಸಿದರು. ಹೂವಿನಂತೆ ಕೋಮಲರಾದ ಕುಮಾರಕರ ಈ ಅವಸ್ಥೆಯನ್ನು ಕಂಡು ದಶರಥ ಮಹಾರಾಜನು ಮೂರ್ಛೆಯನ್ನು ಹೊಂದಿದನು. ಅರಮನೆಯೊಳಗಿನ ಎಲ್ಲ ಜನರೂ ಕಣ್ಣೀರುಸುರಿಸಿ ಅಳಲಾರಂಭಿಸಿದರು. ಮತ್ತು ಎಲ್ಲರೂ ಕೈಕೇಯಿ ರಾಣಿಯ ಮೇಲೆ ತಪ್ಪುಹೊರಿಸಿ ಅವಳನ್ನು ಪರಿಪರಿಯಿಂದ ಹಳಿದರು. ಅಯೋಧ್ಯಾ ಪಟ್ಟಣದ

ನಿವಾಸಿಗಳು ಶ್ರೀರಾಮನನ್ನು ಅಗಲಿ ಇರಲಾರದೆ, ದುಃಖ ದಿಂದ ಹುಚ್ಚರಾಗಿ ರಾತ್ರಿಯಾಗುವ ವರೆಗೂ ಅವನ ಬೆನ್ನುಹತ್ತಿ ನಡೆದರು. ಅವರಿಗೆ ಅನ್ನನೀರುಗಳೇನೂ ಬೇಡಾದವು. ಶ್ರೀರಾಮನು ಪ್ರೇಮದಿಂದ ಕುರುಡರಾದ ಈ ಜನರು ಹಿಂದಿರುಗದಿದ್ದುದನ್ನು ಕಂಡು, ಅವರೆಲ್ಲರೂ ಮಲಗಿದ್ದಾಗ ಒಳ್ಳೇ ಬೆಳಗಿನಲ್ಲಿ ಅವರನ್ನು ಬಿಟ್ಟು, ಸಿತಾದೇವಿಯನ್ನೂ ಲಕ್ಷ್ಮಣನನ್ನೂ ಕರಕೊಂಡು ಮುಂದಕ್ಕೆ ಸಾಗಿ ನಡೆದನು. ಜನರು ಎಚ್ಚತ್ತ ಮೇಲೆ ಉಪಾಯಗಾಣದೆ ಅಯೋಧ್ಯೆಗೆ ತಿರುಗಿದರು.

ಕೋಸಲದೇಶದ ಮೇರೆಯನ್ನು ಮುಟ್ಟಿದ ಕೂಡಲೆ ಸುಮಂತನು ರಥವನ್ನು ಹಿಂದಕ್ಕೆ ತಕ್ಕೊಂಡು ಹೋದನು. ಆ ಬಳಿಕ ಅವರು ಮೂವರು ಕಾಲುನಡಿಗೆಯಿಂದಲೇ ಹೊರಟರು. ಭಯಂಕರವಾದ ಅಡವಿ, ಕಲ್ಲು ಮುಳ್ಳು ಗಳಿಂದ ತುಂಬಿದ ಮಾರ್ಗಗಳು, ಅಲ್ಲಲ್ಲಿಗೆ ಹಾವು ಚೇಳುಗಳು ದೃಷ್ಟಿಗೆ ಬೀಳುತ್ತಿದ್ದವು. ಯಾರೂ ಎಂದೂ ಉಪಯೋಗಿಸದಿದ್ದಂತಹ ದಾರಿಗಳನ್ನು ತುಳಿಯುತ್ತ ಅವರು ಮುಂದಕ್ಕೆ ಸಾಗಿದರು. ಗಂಗಾನದಿಯನ್ನು ದಾಟಿ ಭಯಂಕರವಾದ ಅಡವಿಯೊಳಗಿಂದ ಹಾಯ್ದು, ಚಿತ್ರಕೂಟ ಪರ್ವತಕ್ಕೆ ಬಂದು ತಲುಪಿದರು.

ಇತ್ತ ಅಯೋಧ್ಯೆಯು ಅತ್ಯಂತ ಕೆಟ್ಟ ಸ್ಥಿತಿಯನ್ನು ಹೊಂದಿತ್ತು. ದಶರಥ ಮಹಾರಾಜನು ಇಡೀ ದಿವಸ ಹಾ ! ಮಗುವೆ, ರಾಮಾ, ಹಾ ! ಮಗುವೆ, ಲಕ್ಷ್ಮಣಾ ಎಂದು ದುಃಖದಿಂದ ಗೋಳಿಡುತ್ತಿದ್ದನು. ಅರಸನ ಪರಿವಾರದವರೆಲ್ಲರೂ ಮಹಾರಾಜನ ದುಃಖವನ್ನು ಕಂಡು ಶೋಕಸಾಗರದಲ್ಲಿ ಮುಳುಗಿ ಥಡವನ್ನು ಕಾಣದೆ ತೊಳಲುತ್ತಿದ್ದರು. ಆಗ ದಶರಥ ಮಹಾರಾಜನು ಕೌಸಲ್ಯಾರಾಣಿಯನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು, ದುಃಖದಿಂದ ನಿಟ್ಟುಸುರುಗಳನ್ನು ಬಿಡುತ್ತ ಅಂದದ್ದು —

" ಪ್ರಿಯ ಕೌಸಲ್ಯಾ ! ನಾನು ಮಾಡಿದ ಪಾಪವು ಕಟ್ಟಕಡೆಗೆ ನನ್ನನ್ನು ಬಿಡಲಿಲ್ಲೆಂಬಂತಾಯಿತು. ಹಾಯ್ ! ಪೂರ್ವ ವಯಸ್ಸಿನಲ್ಲಿ ನಡೆದ ಪ್ರಸಂಗವು ಇಂದು ನನ್ನ ಹೃದಯಕ್ಕೆ ಧಕ್ಕಿಯನ್ನು ಕೊಟ್ಟಿತು. ಸಾಯುವ ಹಾದಿಯನ್ನು ಹಿಡಿದ ಬ್ರಾಹ್ಮಣನ ಮಗನ ನಕ್ಷತ್ರಗಳಂತೆ ಮಿನುಗುತ್ತಿರುವ ಎರಡು ಕಣ್ಣುಗಳು ಇಂದಿಗೂ ನನ್ನ ಕಣ್ಣಮುಂದೆ ಬರುತ್ತಿರುವವು! ಮತ್ತು ಅವುಗಳಿಂದ ದಯದ ಬೇಡಿಕೆಯು ಒಡೆದು. ಕಾಣುತ್ತಿರುವುದು.

“ ಪ್ರಾಣನಾಥರೆ, ಇಂತಹ ಯಾವ ಪಾಪವು ನಿಮ್ಮಿಂದ ಘಟಿಸಿತ್ತು? ಕೌಸಲ್ಯಾರಾಣಿಯು ಮಹಾರಾಜರ ತಲೆಯ ಮೇಲೆ ಕೈಯಿಟ್ಟು ಪ್ರಶ್ನೆಮಾಡಿದಳು.

“ ಕೌಸಲ್ಯಾ, ಆ ಸುದ್ದಿಯನ್ನು ಹೇಳುತ್ತೇನೆ ಕೇಳು. ಆ ಕಾಲಕ್ಕೆ ನಾನು ಇನ್ನೂ ತಾರುಣ್ಯ ದಲ್ಲಿದ್ದೆನು. ನನ್ನ ಕೈಯಿಂದ ಬಿಟ್ಟ ಬಾಣಗಳು ಕತ್ತಲೆ ಯಲ್ಲಿದ್ದ ಬೇಟೆಯನ್ನು ಕೂಡ ಹಿಡಿಯುತ್ತಿದ್ದವು.

ಆ ಕಾಲಕ್ಕೆ ನನ್ನಲ್ಲಿ ಬೇಟೆಯ ವ್ಯಸನವು ಬಹಳ ಬೆಳೆದಿತ್ತು. ಹೀಗಿರಲು ಒಂದು ದಿವಸ (ಕತ್ತಲೆಯ) ರಾತ್ರಿ ಯಲ್ಲಿ ಬೇಟೆಯನ್ನು ಶೋಧಿಸುತ್ತ ಒಂದು ನದಿಯ ದಂಡೆ ಗುಂಟ ತಿರುಗುತ್ತಿದ್ದೆನು ಅಲ್ಲಿಂದ ಸ್ವಲ್ಪದೂರದಲ್ಲಿ ಬುಡು-ಬುಡು-ಬುಡು ಎಂಬ ಸಪ್ಪಳವು ನನ್ನ ಕಿವಿಗೆ ಬಿತ್ತು ಅದನ್ನು ಕೇಳಿ ಯಾವದೋ ಒಂದು ಪ್ರಾಣಿಯು ನೀರು ಕುಡಿಯಲು ಬಂದಿರುವದೆಂದು ನನಗೆ ಭಾಸವಾಯಿತು. ಕೂಡಲೆ ನಾನು ಶಬ್ದವೇಧಿಯಾದ ಒಂದು ಬಾಣವನ್ನು ಬಿಟ್ಟೆನು. ಅದು ಆದೇ ದಿಕ್ಕಿನಿಂದ ಸರಸರನೆ ಸಾಗಿ ಹೋಯಿತು. ಆ ಬಳಿಕ ಸ್ವಲ್ಪ ಹೊತ್ತಿನಮೇಲೆ ‘ಹಾ! ಪ್ರಭುವೆ, ಹಾ! ನಾಥನೆ” ಎಂಬ ಶಬ್ದಗಳು ನನ್ನ ಕಿವಿಗೆ ಬಿದ್ದವು. ಹಾನು ಅಲ್ಲಿಗೆ ಓಡಿ ಹೋಗಿ ನೋಡಲು, ಒಂದು ಆಶ್ಚರ್ಯಕರವಾದ ನೋಟವು ನನ್ನ ಕಣ್ಣಿಗೆ

ಬಿಕ್ಕತ್ತು. ಒಬ್ಬ ತರುಣನು ಸಣ್ಣ ಬಾಣದಿಂದ ಅತ್ಯಂತ ಭಯಂಕರವಾದ ಘಾಯಪಟ್ಟು, ಒದ್ದಾಡುತ್ತ ಬಿದ್ದಿದ್ದನು. ಅವನ ಬಳಿಯಲ್ಲಿಯೇ ನೀರಿನಿಂದ ತುಂಬಿದ ಹೂಜೆಯು **ಇತ್ತು**. ನನ್ನನ್ನು ಕಂಡು ಆ ತರುಣನು— “ ಎಲೈ ತರುಣ ಬೇಟೆಗಾರನೆ, ಇಲ್ಲಿಂದ ತುಸು ದೂರದಲ್ಲಿ ನನ್ನ ಕುರುಡರಾದ ತಾಯಿತಂದೆಗಳು ಕುಳಿತಿರುವರು. ಅವರು ನೀರಡಿಕೆಯಿಂದ ಬಹಳ ಬಳಲುತ್ತಿದ್ದಾರೆ. ಈ ಹೂಜಿಯನ್ನು ತಕ್ಕೊಂಡು ಹೋಗಿ, ಅವರಿಗೆ ನೀರು ಕೊಡು, ಆದರೆ ನೀನು ಏನೂ ಮಾತಾಡಬೇಡ ; ನನ್ನ ಈ ಅವಸ್ಥೆಯು ಅವರಿಗೆ ತಿಳಿದರೆ ಅವರು ನಿನ್ನನ್ನು ಶಪಿಸುವರು; ನೀನು ಅಲ್ಲಿಗೆ ಹೋಗದಿದ್ದರೆ ಅವರು ನೀರಿಲ್ಲದೆ ಪ್ರಾಣ...”

ಈ ಮಾತು ಮುಗಿಯುವ ಪೂರ್ವದಲ್ಲಿಯೇ ಆ ತರುಣನ ಪ್ರಾಣದೀಪವು ನಂದಿಹೋಯಿತು. ಆ ಬಳಿಕ ನಾನು ಆ ನೀರಿನ ಹೂಜಿಯನ್ನು ತಕ್ಕೊಂಡು ಕುರುಡರೂ ಮುಪ್ಪಿನವರೂ ಆದ ತಾಯಿತಂದೆಗಳ ಬಳಿಗೆ ಹೋದೆನು. ಪಾತ್ರೆಯಲ್ಲಿ ನೀರುತುಂಬಿ ಅವರಿಗೆ ಕುಡಿಯಲಿಕ್ಕೆ ಕೊಟ್ಟೆನು ಅವರು ಪ್ರಶ್ನಮಾಡಿದರು. ನನ್ನಿಂದ ಸುಮ್ಮನಿರುವದಾಗಲಿಲ್ಲ. ಅವರ ಕಾಲಿಗೆ ಬಿದ್ದು ನಡೆದ ವೃತ್ತಾಂತವನ್ನು ಅವರ ಮುಂದೆ ಹೇಳಿದೆನು. ಅವರು ನೀರಿಲ್ಲದ ಮೀನದಂತೆ ಬಹಳ ಚಡಪಡಿಸಿದರು. ಮತ್ತು

ಅತ್ಯಂತ ದುಃಖದಿಂದ— “ ಎಲೈ ಬೇಟೆಗಾರನೆ, ಪುತ್ರ ವಿಯೋಗದಿಂದ ನಾವು ಹೇಗೆ ಮರಣ ದುಃಖವನ್ನು ಅನುಭವಿಸುವೆವೋ ಅದೇ ಪ್ರಕಾರ ನೀನಾದರೂ ಪುತ್ರವಿಯೋಗದಿಂದ ದುಃಖವನ್ನು ಹೊಂದಿ ಸಾಯುವೆ.” ಎಂದು ಶಾಪವನ್ನು ಕೊಟ್ಟರು. ಕೌಸಲ್ಯಾದೇವಿ, ಇಂದು ಆ ಶಾಪವು ಸತ್ಯವಾಯಿತು ಕಂಡಿಯಾ !” ಇಷ್ಟು ಮಾತನಾಡುವಷ್ಟರಲ್ಲಿ ದಶರಥ ಮಹಾರಾಜನು ಶಕ್ತಿಗುಂದಿ ಸುಮ್ಮನಾದನು.

ಆ ತರುವಾಯ, ಈ ದುಃಖವು ದಿನದಿನಕ್ಕೆ ಹೆಚ್ಚಾಗುತ್ತ ಹೋಯಿತು. ಮಕ್ಕಳು ವನವಾಸಕ್ಕೆ ಹೋದ ಆರನೇ ದಿವಸ ದಶರಥ ಮಹಾರಾಜನ ಆತ್ಮವು ದುಃಖದಿಂದ ತೊಳಲುವ ಆತನ ದೇಹದಿಂದ ಹೊರಟು ಪರಂಧಾಮಕ್ಕೆ ಹೊರಟು ಹೋಯಿತು.

ಆ ತರುವಾಯು, ಎಲ್ಲ ಕಾರಭಾರವು ವಸಿಷ್ಠ ಮಹರ್ಷಿಗಳ ಆಧೀನಕ್ಕೆ ಬಂದಿತು. ಅವರು ಕೂಡಲೆ ಅಜ್ಜನ ಮನೆಗೆ ಹೋದ ಭರತ ಶತ್ರುಘ್ನರನ್ನು ಕರಕೊಂಡು ಬರಲಿಕ್ಕೆ ದೂತರನ್ನು ಅಟ್ಟಿದರು.

ಭರತನು ಎಲ್ಲ ವೃತ್ತಾಂತವನ್ನು ಕೇಳಿಕೊಂಡು ಮನಸಿನಲ್ಲಿ ಬಹಳ ಮರುಗಿ ಕಣ್ಣೀರುಸುರಿಸಿ ದುಃಖಪಟ್ಟನು. ಈ ಮಹಾಪರಾಧಕ್ಕೆ ತನ್ನ ತಾಯಿಯೇ

ಕಾರಣಳಾದಳೆಂದು ಅವಳನ್ನು ಬಹಳವಾಗಿ ನಿಂದಿಸಿದನು. ಅಯೋಧ್ಯೆಯ ಜನರೆಲ್ಲರೂ ಅವನಿಗೆ ಪಟ್ಟದ ಮೇಲೆ ಕೂಡಬೇಕೆಂದು ವಿಜ್ಞಾಪನೆ ಮಾಡಿಕೊಂಡರು. ಆದರೆ ಭರತನು ಅದಕ್ಕೆ ಮನಸುಮಾಡದೆ ರಾಮನೇ ಅರಸನು; ಭರತನು ಆತನ ಸೇವಕನು, ಎಂದು ಎಲ್ಲ ಜನರಿಗೂ ಸ್ಪಷ್ಟವಾಗಿ ಹೇಳಿದನು. ಆ ಬಳಿಕ ಅವನು ತಂದೆಯ ಉತ್ತರಕ್ರಿಯಾದಿಗಳನ್ನು ಮಾಡಿಕೊಂಡು ಎಲ್ಲ ಪರಿವಾರ ದೊಡನೆ ಶ್ರೀರಾಮನನ್ನು ಹುಡುಕುವುದಕ್ಕೆ ಹೊರಟನು.

ತಿರುಗುತ್ತ ತಿರುಗುತ್ತ ಅವರು ಒಳ್ಳೇ ಶ್ರಮ ಬಟ್ಟು ಚಿತ್ರಕೂಟ ಪರ್ವತಕ್ಕೆ ಬಂದು ಮುಟ್ಟಿ ದರು. ಭರತನು ರಾಮಲಕ್ಷ್ಮಣರಿಬ್ಬರನ್ನು ಕಂಡು ದುಃಖದಿಂದ ಆಕ್ರೋಶಮಾಡಿದನು. ಮತ್ತು ತಂದೆಯವರ ಮರಣದ ವೃತ್ತಾಂತವನ್ನು ಅವರಿಗೆ ವಿದಿತಪಡಿಸಿ ಅಯೋಧ್ಯೆಗೆ ತಿರುಗಿ ಬರಬೇಕೆಂದು ವಿಜ್ಞಾಪನೆಯನ್ನು ಮಾಡಿಕೊಂಡನು.

ಆಗ ಶ್ರೀರಾಮನು ತಮ್ಮಾ, ನಾನು ತಂದೆಯವರ ಅಪ್ಪಣೆಯನ್ನು ಹೇಗೆ ಮೀರಲಿ? ವನವಾಸದ ಅವಧಿಯು ಮುಗಿಯುವ ತನಕ ನಾನು ಅಯೋಧ್ಯೆಗೆ ಬರುವದು ಶಕ್ಯವಿಲ್ಲ. ಪ್ರಜೆಗಳನ್ನು ನೀನೇ ಸರಿಯಾಗಿ ಪಾಲಿಸು, ಎಂದು ಹೇಳಿದನು. ಕಟ್ಟಕಡೆಗೆ ಭರತನು ನಿರುಪಾಯ

ನಾಗಿ ಬಹು ದುಃಖದಿಂದ ಅಯೋಧ್ಯೆಗೆ ಮರಳಿ ಹೋಗಿ ಶ್ರೀರಾಮನ ಪಾದುಕೆಗಳನ್ನು ಸಿಂಹಾಸನದ ಮೇಲೆ ಸ್ಥಾಪಿಸಿ ರಾಜ್ಯಕಾರಭಾರವನ್ನು ಸಾಗಿಸಿದನು.

## III

ಗೋದಾವರೀ ತೀರದ ಪಂಚವಟಿಯ ಸ್ಥಾನವು ಬಹು ರಮ್ಯವಾದದ್ದು. ಈಗಿನ ನಾಶಿಕ ಪಟ್ಟಣವೇ ಆ ಸ್ಥಾನವು. ಅಲ್ಲಿ ಯಾವಾಗಲು ಹಚ್ಚಗೆ ಹಸುರು ಮುರಿಯುವಹುಲ್ಲು ಬೆಳೆದ ಅಡವಿಗಳು ಎರಡೂ ತೀರಗಳಲ್ಲಿ ಹಬ್ಬಿದ್ದವು. ಚಿಗರಿಗಳು ಆ ಅಡವಿಗಳಲ್ಲಿ ಅತ್ತಿತ್ತ ಉಲ್ಹಾಸದಿಂದ ಜಿಗಿದಾಡುತ್ತ ವಿನೋದ ಮಾಡುತ್ತಿರುವದು ದೃಷ್ಟಿಗೆ ಬೀಳುತ್ತಿತ್ತು. ಸಮೀಪದ ಅಡವಿಯಲ್ಲಿ ಸೀತಾಫಲ ಮಾವು ತೆಂಗು ಹಲಸು ಮೊದಲಾದ ಫಲಗಳು ಸಾಕಷ್ಟು ದೊರೆಯುತ್ತಿದ್ದವು ಶ್ರೀರಾಮನು ತಿರುಗುತ್ತ ತಿರುಗುತ್ತ ಅಲ್ಲಿಗೆ ಬಂದನು. ಲಕ್ಷ್ಮಣನು ಅಲ್ಲಿ ಒಂದು ಎಲೆ ಮನೆಯನ್ನು ಕಟ್ಟಿದನು. ಸೀತಾದೇವಿಯು ಸುತ್ತಮುತ್ತಲಿನ ಭೂಮಿಯಲ್ಲಿ ಒಂದು ಸುಂದರವಾದ ತೋಟವನ್ನು ಮಾಡಿದಳು. ಲಕ್ಷ್ಮಣನು ಹಣ್ಣುಕಾಯಿಗಳನ್ನೂ ಗಡ್ಡೆಗೆಣಸುಗಳನ್ನೂ ತಂದು ಶ್ರೀರಾಮನಿಗೂ ಸೀತೆಗೂ ತಿನ್ನಲಿಕ್ಕೆ ಕೊಡುತ್ತಿದ್ದನು. ಇಳಿಹೊತ್ತಿನಲ್ಲಿ ಸೀತೆಯು ತೋಟದಲ್ಲಿ ತಾನೇ ಹಚ್ಚಿ ಬೆಳೆಯಿಸಿದ ಗಿಡಗಳನ್ನು ಕಾಪಾಡುತ್ತಿದ್ದಳು.

ಮತ್ತು ವಿನೋದ ಮಾಡುತ್ತ ಸಂಚರಿಸುತ್ತ ಅಲ್ಲಿಗೆ ಬಂದ ಚಿಗರಿಗಳ ಮೈಯನ್ನು ಪ್ರೀತಿಯಿಂದ ತಿಕ್ಕಿ ಆನಂದ ಪಡುತ್ತಿದ್ದಳು

ಈ ಮೇರೆಗೆ ಅವರು ಶಾಂತಿಯಿಂದ ಕಾಲಹರಣ ಮಾಡುತ್ತ ಇರುತ್ತಿರಲು, ಒಂದಾನೊಂದು ದಿವಸ ಒಳ್ಳೇ ವಿಶಾಲವಾದ ದೇಹವುಳ್ಳ ಭಯಂಕರ ಸ್ವರೂಪದ ಶೂರ್ಪ ನಖಿಯೆಂಬೊಬ್ಬ ರಕ್ಕಸಿಯು ಅಲ್ಲಿಗೆ ಬಂದಳು. ಅವಳು ಶ್ರೀರಾಮನ ಸುಂದರವಾದ ರೂಪವನ್ನು ಕಂಡು ಅವನನ್ನು ಮದುವೆಮಾಡಿಕೊಳ್ಳಬೇಕೆಂಬ ತನ್ನ ಮನಸ್ಸಿನ ಭಾವ ವನ್ನು ವ್ಯಕ್ತಮಾಡಿದಳು. ಆದರೆ ರಾಮನು ಸೀತಾದೇವಿ ಯನ್ನುಳಿದು, ಜಗತ್ತಿನೊಳಗಿನ ವಿಶ್ವ ಸ್ತ್ರೀಯರೆಲ್ಲರನ್ನು ತಾಯಿಯಂತೆಯೂ, ತಂಗಿಯಂತೆಯೂ ಭಾವಿಸುತ್ತಿದ್ದನು. ಶ್ರೀರಾಮನು ಶೂರ್ಪನಖಿಗೆ ಪರಿಪರಿಯಿಂದ ತಿಳಿಸಿ ಹೇಳಿ ದನು ಆದರೆ ಅವಳು ಒಪ್ಪಲಿಲ್ಲ. ಆದುದರಿಂದ ಲಕ್ಷ್ಮ ಣನು ಸಿಟ್ಟಾದನು. ಅವಳ ಕಿವಿಮೂಗುಗಳನ್ನು ಕೊಯ್ದು ಹಾಕಿದನು. ಶೂರ್ಪನಖಿಯು ರಕ್ತವನ್ನು ಸುರಿಸುತ್ತ ಅಲ್ಲಿಂದ ಓಡಿಹೋದಳು. ಆಗ ರಾಮಲಕ್ಷ್ಮಣರು ನಮ್ಮ ಮೇಲಿನ ಸಂಕಟವು ದೂರಾಯಿತೆಂದು ಅಂದರು. ಆದರೆ ಸ್ವಲ್ಪ ಹೊತ್ತಿನ ಮೇಲೆ ಶೂರ್ಪನಖಿಯು ಖರದೂಷಣರೆಂಬ ತನ್ನ ಇಬ್ಬರು ಬಂಧುಗಳನ್ನು ಒಡಗೊಂಡು ಬಂದಳು.

ಅವರ ಸಂಗಡ ಮತ್ತೆ ಎಷ್ಟೋ ಮಂದಿ ರಕ್ಕಸರು ಬಂದಿದ್ದರು. ಆಗ ಅಲ್ಲಿ ಒಂದು ದೊಡ್ಡ ಯುದ್ಧವೇ ಪ್ರಾರಂಭವಾಯಿತು. ರಾಮಲಕ್ಷ್ಮಣರು ಒಳ್ಳೇ ಪರಾಕ್ರಮದಿಂದ ಎಲ್ಲ ರಾಕ್ಷಸರ ಕೂಡ ಯುದ್ಧ ಮಾಡಿ ವಿಜಯವನ್ನು ಸಂಪಾದಿಸಿದರು. ಶೂರ್ಪನಖಿಯ ಹೊರತು ಎಲ್ಲ ರಾಕ್ಷಸರು ಕೊಲ್ಲಲ್ಪಟ್ಟರು.

ಇದನ್ನೆಲ್ಲ ಕಂಡು ಶೂರ್ಪನಖಿಯು ಲಂಕೆಗೆ ಓಡಿದಳು. ಲಂಕೆಯು ಸಮುದ್ರದಿಂದ ಸುತ್ತುವರಿಯಲ್ಪಟ್ಟ ಒಂದು ಬಹು ದೊಡ್ಡ ಪಟ್ಟಣವಾಗಿತ್ತು. ಅದನ್ನು ರಾವಣನೆಂಬ ಹೆಸರಿನ ಅರಸನು ಆಳುತ್ತಿದ್ದನು. ಅವನು ಒಳ್ಳೇ ಬಲಶಾಲಿಯೂ ವಿದ್ವಾಂಸನೂ ಆಗಿದ್ದನು. ಆದರೆ ಬಹಳ ದುರ್ಜನತೆಯುವನು. ಅವನು ಎಷ್ಟೋ ಹೆಂಗುಸರನ್ನು ತನ್ನ ಅರಮನೆಯಲ್ಲಿ ಸೆರೆ ಇಟ್ಟಿದ್ದನು. ಶೂರ್ಪನಖಿಯು ರಾವಣನ ತಂಗಿಯು. ತನ್ನ ತಂಗಿಯು ಕಿವಿಮೂಗುಗಳನ್ನು ಕೊಯಿಸಿಕೊಂಡು ಬಂದದ್ದನ್ನು ಕಂಡು ರಾವಣನು ಬಹಳ ಸಿಟ್ಟಾಗಿ ನಡೆದ ಸಂಗತಿಯನ್ನು ಅವಳಿಗೆ ಕೇಳಿದನು. ಶೂರ್ಪನಖಿಯು ಶ್ರೀರಾಮಲಕ್ಷ್ಮಣರ ವೃತ್ತಾಂತವನ್ನು ಹೇಳಿದಳು. ಮತ್ತು ಶ್ರೀರಾಮನ ಬಳಿಯಲ್ಲಿ ಒಳ್ಳೇ ಚಲುವೆಯಾದ ಸೀತೆಯೆಂಬ ಹೆಸರಿನ ಒಬ್ಬ ಸ್ತ್ರೀಯು ಇರುವಳು; ಅವಳು ನಿನ್ನ ಪಟ್ಟರಾಣಿಯಾಗಲು ಅತ್ಯಂತ ಯೋಗ್ಯ

ಳೆಂತಲೂ ಹೇಳಿದಳು. ರಾವಣನಂತಹ ದುರಾಚಾರಿಯ ಕಿವಿಗೆ ಸುಂದರ ಸ್ತ್ರೀಯ ಹೆಸರು ಬಿದ್ದ ಮೇಲೆ ಕೇಳುವ ದೇನು ? ತತ್ಕಾಲಕ್ಕೆ ಅವನು ಆ ಸೀತೆಯನ್ನು ಹೇಗಾದರೂ ಮಾಡಿ ಎತ್ತಿಕೊಂಡು ಬರುವ ನಿಶ್ಚಯವನ್ನು ಮಾಡಿದನು. ಆದರೆ ಶೂರ್ಪನಖಿಯು ಅವನಿಗೆ–"ಶ್ರೀರಾಮಲಕ್ಷ್ಮಣರು ಸಾಮಾನ್ಯರೆಂದು ತಿಳಿಯಬೇಡ; ಅವರು ಬಹು ಶೂರರಿರು ವರು. ಅವರ ಮೇಲೆ ವೈಮರೆತು ಸಾಗಿಹೋಗುವದರಿಂದ ಹಿತವಾಗಲಿಕ್ಕಿಲ್ಲ" ಎಂದು ಎಚ್ಚರಿಕೆಯನ್ನು ಕೊಟ್ಟು ಹೇಳಿದಳು.

ತರುವಾಯ ರಾವಣನು ದಂಡಕಾರಣ್ಯಕ್ಕೆ ಬಂದು ಅಲ್ಲಿ ಮಾರೀಚನೆಂಬ ಹೆಸರಿನ ತನ್ನ ಮಾವನನ್ನು ಕೂಡಿ ಕೊಂಡು ಸೀತೆಯನ್ನು ಎತ್ತಿಕೊಂಡು ಬರುವ ಉಪಾಯ ವನ್ನು ಚಿಂತಿಸಲಾರಂಭಿಸಿದನು.

## IV

ಪ್ರಾತಃಕಾಲದ ಸಮಯ; ಗೋದಾವರಿಯ ಪ್ರವಾ ಹವು ಶಾಂತವಾಗಿ ಹರಿಯುತ್ತಿತ್ತು. ಸೂರ್ಯನ ಬಾಲ ಕಿರಣಗಳು ನದಿಯ ಪ್ರವಾಹದಮೇಲೆ ಚಕ್ಕಂದದಿಂದ ನಲಿ ದಾಡುತ್ತಿದ್ದವು. ಶ್ರೀರಾಮಲಕ್ಷ್ಮಣರು ಸೃಷ್ಟಿಯ ಸೌಂ ದರ್ಯವನ್ನು ನೋಡುತ್ತ ಎಲೆಮನೆಯ ಅಂಗಳದಲ್ಲಿ ಕುಳಿತುಕೊಂಡಿದ್ದರು. ಸೀತಾದೇವಿಯು ಹೂವುಗಳನ್ನು

ಎತ್ತಿ ಮಾಲೆಯನ್ನು ಹೆಣೆಯುತ್ತ ತನ್ನ ಸಣ್ಣ ತೋಟದಲ್ಲಿ ಅತ್ತಿತ್ತ ತಿರುಗಾಡುತ್ತಿದ್ದಳು. ಅವಳಿಗೆ ವಿಶೇಷವಾಗಿ ಈಲಾದ ಪಕ್ಷಿಸಮೂಹವು ಅವಳ ಸುತ್ತುಮುತ್ತು ಹಾರಾಡುತ್ತಿದ್ದವು. ಅಷ್ಟರಲ್ಲಿ ಸೀತಾದೇವಿಯು ಒಂದು ಸುಂದರವಾದ ಚಿಗರಿಯನ್ನು ಕಂಡಳು. ಅದರ ಕೋಡುಗಳು ಸರಳವಾಗಿರದೆ ಡೊಂಕಾಗಿ ಒಳ್ಳೇ ಮನೋಹರವಾಗಿದ್ದವು. ಅದರ ಮೈದೊಗಲು ಬಂಗಾರದ ಬಣ್ಣದ್ದಾಗಿತ್ತು. ಆಗ ಅವಳು ಅಹಹ ! ಈ ಮೃಗವು ಎಷ್ಟು ಸುಂದರವಾಗಿರುವದು, ಈ ತರದ ಮೃಗವನ್ನು ನಾನು ಇನ್ನೂವರೆಗೆ ನೋಡಿದ್ದಿಲ್ಲ" ಹೀಗೆಂದು ಆಶ್ಚರ್ಯಪಟ್ಟು, ಅದನ್ನು ಶ್ರೀರಾಮನಿಗೆ ತೋರಿಸಿ, ತನಗೆ ಅದನ್ನು ಹಿಡಿದುಕೊಡಬೇಕೆಂದು ಆಗ್ರಹಪಟ್ಟಳು. ಶ್ರೀರಾಮನು ಬಿಲ್ಲು ಬಾಣಗಳನ್ನು ತಕ್ಕೊಂಡು ಅದನ್ನು ಹಿಡಿಯಬೇಕೆಂದು ಹೊರಟನು. ಅವನ ಮನಸಿನಲ್ಲಿ ಅದನ್ನು ಕೊಲ್ಲದೆ ಹಿಡಿದು ತರಬೇಕೆಂದು ಇತ್ತು. ಆದರೆ ಆ ಮೃಗವು ಬಹು ಚಪಲವಾದದ್ದು. ಅದು ಶ್ರೀರಾಮನ ಕೈಗೆ ಸಿಕ್ಕಂತೆ ಮಾಡಿ ತಪ್ಪಿಸಿ ದೂರ ಓಡಿ ಹೋಗುತ್ತಿತ್ತು. ನೋಡನೋಡುವಷ್ಟರಲ್ಲಿ ಅದು ಶ್ರೀರಾಮನನ್ನು ಆಶ್ರಮದಿಂದ ಬಹುದೂರ ಒಯ್ದುಬಿಟ್ಟಿತು.

ಲಕ್ಷ್ಮಣನು ಸೀತಾದೇವಿಯನ್ನು ಸಂರಕ್ಷಿಸುತ್ತ ಪರ್ಣಕುಟೀರದ ಹೊರಗೆ ಕುಳಿತಿದ್ದನು. ಅಷ್ಟರಲ್ಲಿ

ರಾಮನು “ಹಾ ! ಲಕ್ಷ್ಮಣಾ, ಹಾ ! ಲಕ್ಷ್ಮಣಾ” ಎಂದು ದೀನ ಸ್ವರದಿಂದ ಕೂಗುವ ಸ್ವರವು ಕೇಳಬಂದಿತು. ಕೂಡಲೆ ಲಕ್ಷ್ಮಣನಿಗೆ ದಿಗಿಲು ಬಿದ್ದಿತು. ಇದೇನೋ ಮೋಸವಿರುವ ದೆಂದು ಅವನ ಮನಸಿಗೆ ಹೊಳೆಯಿತು. ಸೀತಾದೇವಿಯಂತೂ ಬಹಳ ಗಾಬರಿಯಾಗಿ ಶ್ರೀರಾಮನು ನಿಜವಾಗಿಯೇ ಯಾವದೋ ಒಂದು ಸಂಕಟದಲ್ಲಿ ಬಿದ್ದಿರುವನೆಂದು ಭಾವಿ ಸಿದಳು; ಮತ್ತು ಆತನಿಗೆ ಸಾಹಾಯ್ಯವನ್ನು ಮಾಡ ಲೋಸುಗ ಆದಷ್ಟು ಬೇಗನೆ ಅಲ್ಲಿಗೆ ಹೋಗಬೇಕೆಂದು ಒತ್ತಾಯಪಡಿಸಿದಳು.

ಶ್ರೀರಾಮನನ್ನು ಸೋಲಿಸುವಂಥ ಬಲಶಾಲಿಗಳು ಇನ್ನೂವರೆಗೆ ಈ ಭೂಮಿಯಮೇಲೆ ಹುಟ್ಟಿಲ್ಲವೆಂದು ಲಕ್ಷ್ಮ ಣನು ಅರಿತಿದ್ದನು. ಆದಾಗ್ಯೂ ಸೀತಾದೇವಿಯು ಆಗ್ರಹ ತೊಟ್ಟಮೇಲೆ ಮಾಡುವದೇನು ?

ಇತ್ತ ಶ್ರೀರಾಮನು ಜೀವಂತ ಮೃಗವನ್ನು ಹಿಡಿಯು ವದು ಶಕ್ಯವಿಲ್ಲೆಂದು ಅದನ್ನು ಕೊಂದು ತಕ್ಕೊಂಡು ತಿರುಗಿ ಬರುತ್ತಿದ್ದನು. ಆಗ ಲಕ್ಷ್ಮಣನು ದಾರಿಯಲ್ಲಿ ಅವನನ್ನು ಕೂಡಿದನು. ಅವರಿಬ್ಬರ ಸಂಭಾಷಣದಿಂದ “ಈ ಮೃಗವು ಒಬ್ಬ ಮೋಸಗಾರನಾದ ರಾಕ್ಷಸನ ಕಾರಸ್ಥಾನ ವಿರುವದೆಂಬುದು ಅವರಿಗೆ ಸ್ಪಷ್ಟವಾಗಿ ತಿಳಿಯಿತು. ತರು ವಾಯ ಅವರಿಬ್ಬರು ಬಂಧುಗಳು ಒಳ್ಳೇ ಒತ್ತರದಿಂದ ಪರ್ಣ

ಕುಟೀರದ ಬಳಿಗೆ ಬಂದು ನೋಡುತ್ತಾರೆ, ಅಲ್ಲಿ ಸೀತಾ ದೇವಿಯು ಇದ್ದಿಲ್ಲ. ಆಗ ಶ್ರೀರಾಮನು ಒಮ್ಮಿಂದೊಮ್ಮೆ ಅರಿವುಗೆಟ್ಟಂತೆ ಆಗಿ ಸುಮ್ಮನೆ ಕುಳಿತುಬಿಟ್ಟನು. ಅವರು ಬಹಳ ಹೊತ್ತಿನವರೆಗೆ ಸೀತಾದೇವಿಯ ದಾರೀ ನೋಡಿದರು. ಅವಳು ಬರಲಿಲ್ಲ; ಕಡೆಗೆ ಅವರು ಅವಳನ್ನು ಶೋಧಿಸುತ್ತ ಅಲ್ಲಿಂದ ಹೊರಟರು. ಪರ್ಣಕುಟೀರದಿಂದ ಸ್ವಲ್ಪ ದೂರದಲ್ಲಿ ರಥದ ಗಾಲಿಗಳ ಗುರುತುಗಳೂ, ಏನಾದರೂ ಬಡಿದಾಟವಾದ ಚಿಹ್ನಗಳೂ ಸ್ಪಷ್ಟವಾಗಿ ದೃಷ್ಟಿಗೆ ಬೀಳುತ್ತಿದ್ದವು. ಅದಕ್ಕಿಂತ ಸ್ವಲ್ಪ ಮುಂದೆ ಹೋಗಲು, ಅನೇಕ ಗಾಯಪಟ್ಟು ರಕ್ತದಿಂದ ತೊಯ್ದ ಶರೀರವುಳ್ಳ ಜಟಾಯುವನ್ನು ಕಂಡನು. ಆತನು ಟುಕು ಟುಕು ಜೀವವನ್ನು ಹಿಡಿದುಕೊಂಡು ಬಿದ್ದಿದ್ದನು. ಅವನ ನಾಲಿಗೆಯು ತೊದಲುತ್ತಿತ್ತು. ಅವನು ಅದೇ ಸ್ಥಿತಿಯಲ್ಲಿ ಶ್ರೀರಾಮನಿಗೆ ಎಲ್ಲ ವೃತ್ತಾಂತವನ್ನು ನಿವೇದನಮಾಡಿದನು. ಅದರ ಸಾರಾಂಶವೇನಂದರೆ :— " ಲಂಕೆಯ ಅರಸನಾದ ರಾವಣನು ಸನ್ಯಾಸಿಯ ವೇಷದಿಂದ ಬಂದು ಸೀತಾದೇವಿಯನ್ನು ಎತ್ತಿಕೊಂಡು ಹೋಗುತ್ತಿರಲು, ನಾನು ಅವನಿಗೆ ಎದುರಾಗಿ ಕಾದಿ, ಈ ಅವಸ್ಥೆಯನ್ನು ಹೊಂದಿದೆನು " ಇಷ್ಟು ಸುದ್ದಿಯನ್ನು ಹೇಳಿ ಆ ವೀರ ಶ್ರೇಷ್ಠನಾದ ಜಟಾಯುವು ಪ್ರಾಣತ್ಯಾಗವನ್ನು ಮಾಡಿದನು.

ಶ್ರೀರಾಮನೂ ಲಕ್ಷ್ಮಣನೂ ಅಲ್ಲಿಂದ ಮುಂದೆ ಸಾಗಿದರು. ಈಗ ಶ್ರೀರಾಮನು ದಿನದಿನಕ್ಕೆ ದುಃಖದಿಂದ ಬಹಳ ಕೊರಗುತ್ತಲಿದ್ದನು. ಅವನು ಇಡೀ ದಿವಸ ಸೀತಾ ದೇವಿಯನ್ನೇ ಸ್ಮರಿಸುತ್ತಿದ್ದನು. ಹೀಗೆಯೇ ಅವರು ತಿರು ಗುತ್ತ ತಿರುಗುತ್ತ ಋಷ್ಯಮೂಕಪರ್ವತದ ಸಮೀಪಕ್ಕೆ ಬಂದರು. ಅಲ್ಲಿ ಅವರು ಸುಗ್ರೀವರಾಜನ ಸಂಗಡಲೂ, ಆವನ ಮಂತ್ರಿಯಾದ ವೀರ ಹನುಮಂತನ ಸಂಗಡಲೂ ಸ್ನೇಹವನ್ನು ಬೆಳೆಯಿಸಿದರು.

ಸುಗ್ರೀವರಾಜನಿಗೆ ವಾಲಿಯೆಂಬ ಒಬ್ಬ ಅತ್ಯಾಚಾರಿ ಯಾದ ಅಣ್ಣನಿದ್ದನು. ಅವನು ಸುಗ್ರೀವನನ್ನು ಬಹಳ ಪೀಡಿಸುತ್ತಿದ್ದನು. ಶ್ರೀರಾಮನು ವಾಲಿಯ ಕಾಟದಿಂದ ನಿನ್ನನ್ನು ಬಿಡಿಸುತ್ತೇನೆಂದು ಸುಗ್ರೀವ ರಾಜನಿಗೆ ವಚನ ಕೊಟ್ಟನು. ಅದಕ್ಕೆ ಬದಲಾಗಿ ಸುಗ್ರೀವ ರಾಜನು ಸೀತಾ ದೇವಿಯನ್ನು ಶೋಧಿಸುವ ಕಾರ್ಯವನ್ನು ತಾನೇ ವಹಿಸಿ ಕೊಂಡು ವೀರ ಹನುಮಂತನ ಕಡೆಗೆ ದಂಡು ಕೊಟ್ಟು ಕಳುಹಿದನು. ಆತನು ನಾಲ್ಕು ದಿಕ್ಕುಗಳಲ್ಲಿ ತಿರುಗಾಡಿ ಎಲ್ಲಿಯೂ ದೇವಿಯನ್ನು ಕಾಣದೆ ಚಿಂತೆಮಾಡಲಾರಂಭಿಸಿ ದನು. ಕಡೆಗೆ ಅವನು ಸಮುದ್ರವನ್ನು ದಾಟಿ ಲಂಕಾ ಪಟ್ಟಣಕ್ಕೆ ಹೋದನು; ಅಲ್ಲಿ ರಾವಣನು ಅಶೋಕ ವನ ದಲ್ಲಿ ಸೀತಾದೇವಿಯನ್ನು ಸೆರೆಯೊಳಗೆ ಇಟ್ಟದ್ದನ್ನು

ಕಂಡನು. ಆಗ ಅವನು ಶ್ರೀರಾಮನ ಉಂಗುರವನ್ನು ಅವಳಿಗೆ ಕೊಟ್ಟು, ಆತನ ಸಂದೇಶಗಳನ್ನು ವಿದಿತಪಡಿಸಿದನು. ಸೀತಾದೇವಿಯು ಪತಿವಿಯೋಗದಿಂದ ಅತ್ಯಂತ ಕೃಶಳಾಗಿದ್ದಳು. ಅವಳು ಹನುಮಂತನಮುಂದೆ " ಶ್ರೀರಾಮನು ಬೇಗನೆ ಇಲ್ಲಿಗೆ ಬಂದು ತನ್ನನ್ನು ಇಲ್ಲಿಂದ ಕರಕೊಂಡು ಹೋಗಬೇಕೆಂಬ " ತನ್ನ ವಿಜ್ಞಾಪನೆಯನ್ನು ಹೇಳಿ ತನ್ನ ಚೂಡಕವನ್ನು ಆತನ ಕಡೆಗೆ ಕೊಟ್ಟು ಕಳುಹಿದಳು.

ಇಷ್ಟಾದ ಬಳಿಕ ವೀರ ಹನುಮಂತನು ಲಂಕೆಯಲ್ಲಿ ಅನೇಕ ಪರಾಕ್ರಮದ ಕೆಲಸಗಳನ್ನು ಮಾಡಿ ಶ್ರೀರಾಮನ ಬಳಿಗೆ ತಿರುಗಿ ಬಂದು ಎಲ್ಲ ವೃತ್ತಾಂತವನ್ನು ವಿದಿತಪಡಿಸಿದನು. ಸೀತಾದೇವಿಯ ವೃತ್ತಾಂತವನ್ನು ಕೇಳಿ ಶ್ರೀರಾಮನ ಕಣ್ಣುಗಳಿಂದ ಹರ್ಷಾಶ್ರುಗಳು ಸುರಿದವು. ಆಗ ಅವನು ವೀರ ಹನುಮಂತನನ್ನು ಬಹಳವಾಗಿ ಕೊಂಡಾಡಿದನು.

ಆ ಬಳಿಕ ಶ್ರೀರಾಮನು ಯುದ್ಧದ ಸಿದ್ಧತೆಯನ್ನು ಮಾಡತೊಡಗಿದನು. ಅವನು ಸುಗ್ರೀವರಾಜ, ಅವನ ಅಣ್ಣನ ಮಗ ಅಂಗದ, ವೀರ ಹನುಮಂತ, ಜಾಂಬುವಾನ ಇವರೇ ಮೊದಲಾದ ಶೂರ ವೀರರನ್ನು ಸಂಗಡ ಕರೆದುಕೊಂಡನು. ಅವರೆಲ್ಲರೂ ಒಂದು ಪ್ರಚಂಡವಾದ ಸೈನ್ಯದೊಡನೆ ಲಂಕಾ ಪಟ್ಟಣದ ಮೇಲೆ ಸಾಗಿ ಹೋದರು.

ಆದರೆ ಅದಕ್ಕಿಂತ ಮೊದಲು ಸಮುದ್ರವನ್ನು ಗೆಲ್ಲುವದು ಮುಖ್ಯ ಕೆಲಸವಾಗಿತ್ತು. ಯಾಕಂದರೆ ಸಮುದ್ರವನ್ನು ದಾಟಿದ ಹೊರತು ಲಂಕೆಯಲ್ಲಿ ಪ್ರವೇಶ ಮಾಡುವದೇ ಶಕ್ಯವಿರಲಿಲ್ಲ.

ರಾವಣನು ಬಹು ಬಲಶಾಲಿಯಾದ ಅರಸನಾಗಿದ್ದನು; ಆದರೆ ಅವನ ಪಕ್ಷದಿಂದ ಮನಮುಟ್ಟಿ ಹೋರಾಡುವ ವೀರರು ಅವನಲ್ಲಿ ತೀರ ಕಡಿಮೆ ಇದ್ದರು. ಅವನಿಗೆ ಕುಂಭಕರ್ಣ–ವಿಭೀಷಣರೆಂಬ ಹೆಸರಿನ ಇಬ್ಬರು ತಮ್ಮಂದಿರು ಇದ್ದರು. ಅವರಿಬ್ಬರೂ ಮಹಾ ಮುತ್ಸದ್ದಿಗಳೂ ಪರಾಕ್ರಮಿಗಳೂ ಆಗಿದ್ದರು. ಅವರಲ್ಲಿ ವಿಭೀಷಣನು ಬಹಳ ಬುದ್ಧಿವಂತನೂ ನೀತಿವಂತನೂ ಆಗಿದ್ದನು. ಕುಂಭಕರ್ಣನು ಪರಾಕ್ರಮಿಯಾಗಿದ್ದರೂ ಸೋಮಾರಿಯಾಗಿದ್ದನು; ಮತ್ತು ನೀತಿಯಿಂದ ನಡೆಯುವವನಾದರೂ ಅನೀತಿಯಿಂದ ನಡೆಯುವವರ ಕೂಡ ವಿರೋಧ ಮಾಡುತ್ತಿದ್ದಿಲ್ಲ.

ರಾವಣನಿಗೆ ಇಂದ್ರಜಿತುವೆಂಬ ಹೆಸರಿನ ಒಬ್ಬ ಮಗನಿದ್ದನು. ಅವನ ಸಮಾನರಾದ ಗುರಿಹೊಡೆಯುವವರು ಆ ಕಾಲಕ್ಕೆ ಮತ್ತೊಬ್ಬರಾರೂ ಇರಲಿಲ್ಲ. ಅವನು ಯುದ್ಧಕ್ಕೆ ಇದಿರಾದನೆಂದರೆ ಜಯಲಕ್ಷ್ಮಿಯು ಆತನ ಕೊರಳಿಗೇ ಮಾಲೆಯನ್ನು ಹಾಕುವದು ನಿಶ್ಚಯವೆಂಬದನ್ನು ಎಲ್ಲರೂ ಖಂಡಿತವಾಗಿ ಅರಿತಿದ್ದರು.

ಒಂದು ದಿವಸ ವಿಭೀಷಣನೂ ಕುಂಭಕರ್ಣನೂ ಕೂಡಿ ಸೀತಾಹರಣದ ವಿಷಯವಾಗಿ ರಾವಣನನ್ನು ಬಹಳವಾಗಿ ಹೀಯಾಳಿಸಿದರು; ಮತ್ತು ಸೀತಾದೇವಿಯನ್ನು ಬಹುಮಾನಪೂರ್ವಕವಾಗಿ ರಾಮನ ಕಡೆಗೆ ಕಳಿಸಬೇಕೆಂದು ತಿಳಿಸಿ ಹೇಳಿದರು. ಆದರೆ ಗರ್ವಿಷ್ಠನಾದ ರಾವಣನು ಈ ಮಾತಿಗೆ ಕಿವಿಗೊಡುವನೇ? ತರುವಾಯ ವಿಭೀಷಣನು ಅವನ ತಲೆಯಮೇಲೆ ತಪ್ಪು ಹೊರಿಸಿದನು. ರಾವಣನು ಸಿಟ್ಟಾಗಿ ಆತನಿಗೆ ಕುಲಕಲಂಕನೆಂಬಿವೇ ಮೊದಲಾದ ಬಿರಿನುಡಿಗಳನ್ನು ಮಾತಾಡಿದನು. ಅದರಿಂದ ಅಸಂತುಷ್ಟನಾದ ವಿಭೀಷಣನು ತನ್ನ ನಾಲ್ಕುಮಂದಿ ಮಿತ್ರರ ಸಂಗಡ ಶ್ರೀರಾಮನ ಪಕ್ಷಕ್ಕೆ ಬಂದು ಕೂಡಿಕೊಂಡನು.

ಶ್ರೀರಾಮನಿಗೆ ದೊರಕಿದ ವಿಭೀಷಣನ ಸಾಹಾಯ್ಯವು ಬಹು ಲಾಭದಾಯಕವಾಯಿತು. ಆತನ ಆಲೋಚನೆಯ ಪ್ರಕಾರ ನಳನೆಂಬ ಒಬ್ಬ ವಾನರಜಾತಿಯ ಉತ್ತಮ ಶಿಲ್ಪಿಯ ಸಾಹಾಯ್ಯದಿಂದ ಶ್ರೀರಾಮನ ಪಕ್ಷದವರು ಸಮುದ್ರಕ್ಕೆ ಒಂದು ಸೇತುವೆಯನ್ನು ಕಟ್ಟಿ ಅದನ್ನು ದಾಟಿಹೋದರು.

ಲಂಕೆಯ ನೆರೆಯಲ್ಲಿ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಆ ಯುದ್ಧದಲ್ಲಿ ಸಾವಿರಾರು ಜನರು ಕೊಲ್ಲಲ್ಪಟ್ಟರು. ಲಕ್ಷ್ಮಣನು ಅಜಿತನಾದ ಇಂದ್ರಜಿತುವನ್ನೂ ಕುಂಭಕರ್ಣನನ್ನೂ ಸೋಲಿಸಿ ಕೊಂದನು.

ಶ್ರೀರಾಮನು ರಾವಣನ ಹೊಕ್ಕಳಕ್ಕೆ ಗುರಿಯಿಟ್ಟು ಬಾಣ ವನ್ನು ಹೊಡೆದು ಅವನನ್ನು ಯಮಸದನಕ್ಕೆ ಅಟ್ಟಿದನು. ಅದರಿಂದ ಭಯಂಕರವಾದ ಯುದ್ಧವು ಕೊನೆಗಂಡಿತು. ಸತ್ಯಕ್ಕೆ ಜಯವು ದೊರಕಿತು. ಅಧರ್ಮವು ನಷ್ಟವಾಯಿತು.

ರಾವಣನ ಪಟ್ಟದಮೇಲೆ ವಿಭೀಷಣನು ಕುಳ್ಳಿರಿಸಲ್ಪ ಟ್ಟನು. ಆ ಬಳಿಕ ಶ್ರೀರಾಮನು ಸೀತೆಯೊಡನೆ ಪುಷ್ಪಕ ವಿಮಾನದಲ್ಲಿ ಕುಳಿತು ಅಯೋಧ್ಯಾಪುರಿಗೆ ಬಂದನು. ಈಗ ವನವಾಸದ ಅವಧಿಯು ಪೂರ್ಣವಾಗಿ ಮುಗಿಯಿತು. ಶ್ರೀರಾಮನ ಆಗಮನದಿಂದ ಪಟ್ಟಣದ ನಿವಾಸಿಗಳೆಲ್ಲರೂ ಆನಂದಸಾಗರದಲ್ಲಿ ಮುಳುಮುಳುಗಿ ಏಳುತ್ತಲಿದ್ದರು.

ಶ್ರೀರಾಮನು ವನವಾಸ ಬಿಟ್ಟು ತಿರುಗಿ ಅಯೋ ಧ್ಯಕ್ಕೆ ಬರುವತನಕ ಭರತನು ನಂದಿ ಗ್ರಾಮದಲ್ಲಿ ಇರು ತ್ತಿದ್ದನು. ಅವನು ತಪಸ್ವಿಯ ವೇಷದಲ್ಲಿದ್ದು, ಸಿಂಹಾ ಸನದ ಮೇಲೆ ಶ್ರೀರಾಮನ ಪಾದುಕೆಗಳನ್ನು ಸ್ಥಾಪಿಸಿ ರಾಜ್ಯಕಾರಭಾರವನ್ನು ಸಾಗಿಸುತ್ತಿದ್ದನು. ವೀರ ಹನು ಮಂತನು ಅವನಿಗೆ ಶ್ರೀರಾಮನು ಬರುವ ಸುದ್ದಿಯನ್ನು ಹೇಳಿದ ತರುವಾಯ ಅವನು ಅಯೋಧ್ಯೆಗೆ ಬಂದನು

ಸೀತಾದೇವಿಯು ತನ್ನ ಪಾವಿತ್ರ್ಯವನ್ನು ಜನರಿಗೆ ಮನವರಿಕೆ ಮಾಡಿಕೊಡುವದಕ್ಕಾಗಿ, ಅಗ್ನಿಯಲ್ಲಿ ಪ್ರವೇಶ ಮಾಡಿ ಸುರಕ್ಷಿತವಾಗಿ ಹೊರಗೆ ಬಂದಳು. ಶ್ರೀರಾಮನು

ಅಯೋಧ್ಯೆಯ ಸಿಂಹಾಸನದ ಮೇಲೆ ಕುಳಿತು ಅಭಿಷೇಕವನ್ನು ಹೊಂದಿದನು. ಎಲ್ಲ ಕಡೆಗೂ ಜಯಜಯಕಾರವಾಯಿತು.

ಈ ಮೇರೆಗೆ ಸಂತೋಷವಾದಾಗ್ಯೂ ದುಃಖದ ಸಮಾಪ್ತಿಯು ಇನ್ನೂ ವರೆಗೆ ಆಗಿರಲಿಲ್ಲ. ಒಮ್ಮೆ ಶ್ರೀರಾಮನು ಲೋಕಾಭಿಪ್ರಾಯಗಳನ್ನು ತಿಳಿದುಕೊಳ್ಳಲು ಗುಪ್ತ ವೇಷದಿಂದ ಹೊರಟಿರಲು, — "ಶ್ರೀರಾಮನು ರಾವಣನಲ್ಲಿಂದ ಸೀತಾದೇವಿಯನ್ನು ತಿರುಗಿ ಕರಕೊಂಡು ಬಂದನು. ಆದರೆ ಅವಳು ಶುದ್ಧವಾಗಿ ಉಳಿದಿರುವಳೋ ಇಲ್ಲವೋ ಯಾರಿಗೆ ಗೊತ್ತು? ಶ್ರೀರಾಮನಂಥ ಅರಸರು ಹೀಗೆ ನಡೆಯುವದು ಸರಿಯಲ್ಲ" ಹೀಗೆಂದು ಆಡಿಕೊಳ್ಳುವದು ಅವನ ಕಿವಿಗೆ ಬಿದ್ದಿತು.

ಈ ಮಾತನ್ನು ಕೇಳಿ ಶ್ರೀರಾಮನು ದುಃಖಾಗ್ನಿಯಲ್ಲಿ ಬೆಂದುಹೋದನು. ಜನಾಪವಾದವನ್ನು ದೂರ ಮಾಡುವದಕ್ಕಾಗಿ ಅವನು ಸೀತಾದೇವಿಯನ್ನು ಬಿಡುವ ನಿಶ್ಚಯವನ್ನು ಮಾಡಿದನು; ಮತ್ತು ಅವಳನ್ನು ವನದಲ್ಲಿ ಬಿಟ್ಟು ಬರುವದಕ್ಕಾಗಿ ಲಕ್ಷ್ಮಣನಿಗೆ ಅಪ್ಪಣೆಯನ್ನು ಮಾಡಿದನು. ಅವನು ಶ್ರೀರಾಮನ ಅಪ್ಪಣೆಯನ್ನು ಕೇಳಿ ಮನಸಿನಲ್ಲಿ ಬಹಳ ತಳಮಳಿಸಿದನು. ಆದರೆ ಮಾಡುವದೇನು? ಸೀತಾದೇವಿಯನ್ನು ಬೇರೊಂದು ನೆವದಿಂದ ವನಕ್ಕೆ

ಕರಕೊಂಡು ಹೋಗಿ ಅಲ್ಲಿ ಅವಳಿಗೆ ಶ್ರೀರಾಮನು ತ್ಯಾಗ ಮಾಡಿದ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಸೀತಾದೇವಿಯು ಮೂರ್ಛೆ ಹೊಂದಿ ನೆಲದಮೇಲೆ ಬಿದ್ದಳು.

ಇತ್ತ ಶ್ರೀರಾಮನಾದರೂ ಸೀತಾದೇವಿಯನ್ನು ಬಿಟ್ಟು ಸುಖದಿಂದ ಇರಲಿಲ್ಲ. ಅವಳು ಆತನ ಅರ್ಧಾಂಗಿಯಾಗಿದ್ದಾಗ್ಯೂ ಜನರ ಮನಸಿನೊಳಗಿನ ಭಾವನೆಯನ್ನು ಬದಲಿಸುವದಕ್ಕಾಗಿಯೇ ಆತನು ಈ ಪ್ರಕಾರ ಪ್ರಿಯ ಜನರ ತ್ಯಾಗರೂಪದ ಕ್ರೂರಕರ್ಮವನ್ನು ಮಾಡಿದ್ದನು.

ಈ ಕಾಲಕ್ಕೆ ಸೀತಾದೇವಿಯು ಗರ್ಭವತಿಯಾಗಿದ್ದಳು ವಾಲ್ಮೀಕಿ ಋಷಿಗಳ ಆಶ್ರಮದಲ್ಲಿ ಇರುತ್ತಿದ್ದಳು. ಅಲ್ಲಿ ಅವಳು ಅವಳಿಜವಳಿ ಮಕ್ಕಳನ್ನು ಹಡೆದಳು. ಅವರು ಆಶ್ರಮದಲ್ಲಿಯೇ ಬೆಳೆದು ದೊಡ್ಡವರಾದರು. ಋಷಿಗಳು ಅವರಿಗೆ ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿಸಿದರು. ಆ ಉಭಯ ಬಂಧುಗಳು ಆಗಾಗ್ಗೆ ಸುತ್ತು ಮುತ್ತಲಿನ ಸುಂದರವಾದ ಅಡವಿಯಲ್ಲಿ ತಿರುಗಾಡುತ್ತಿದ್ದರು. ಮತ್ತೊಮ್ಮೆ ನದಿಯ ದಂಡೆಯ ಮೇಲೆ ಅತ್ತಿತ್ತ ಓಡಾಡುವರು. ಮತ್ತು ನೆರೆಯಲ್ಲಿರುವ ಭಿಲ್ಲರ ಹುಡುಗರ ಸಂಗಡ ಗುರಿಹೊಡೆಯುತ್ತಿದ್ದರು. ಈ ಮೇರೆಗೆ ಆ ಕುಮಾರಕರು ಆ ವನಪ್ರದೇಶದಲ್ಲಿ ಹಲವು ಬಗೆಯಿಂದ ಅನೇಕ ಪ್ರಕಾರದ ಪ್ರಯತ್ನಗಳನ್ನು ಮಾಡುತ್ತಿದ್ದರು

ವಾಲ್ಮೀಕಿ ಋಷಿಗಳು ರಾಮಾಯಣದ ರಚನೆಯನ್ನು ಮಾಡಿದ್ದರು. ಅದನ್ನು ಅವರು ಆ ಉಭಯ ಬಂಧುಗಳಿಗೆ ಒಳ್ಳೇ ಚಂದವಾಗಿ ಬಾಯಿಂದ ಅನ್ನಲಿಕ್ಕೆ ಬರುವಂತೆ ಕಲಿಸಿದ್ದರು. ಅದನ್ನು ಅವರು ವಾದ್ಯಗಳ ಸಂಗಡ ಬಹು ಸರಸವಾಗಿ ಹಾಡುತ್ತಿದ್ದರು. ಇವೆಲ್ಲವುಗಳ ಸಂಗಡ ಅವರಿಗೆ ರಾಜಧರ್ಮಗಳ ಉಪದೇಶವೂ ಕೊಡಲ್ಪಟ್ಟಿತ್ತು.

ಇತ್ತ ಅಯೋಧ್ಯೆಯಲ್ಲಿ ಸೀತಾದೇವಿಯ ವಿರಹದಿಂದ ವ್ಯಾಕುಲನಾದ ಶ್ರೀರಾಮನು ಅಶ್ವಮೇಧವನ್ನು ಮಾಡಲು ಪ್ರಕ್ರಮಿಸಿದನು. ಆದರೆ ಹೆಂಡತಿಯ ಹೊರತು ಯಜ್ಞದಲ್ಲಿ ಹತ್ತಿರ ಕೂಡುವವರು ಯಾರು? ಎಲ್ಲ ಜನರು ರಾಮಚಂದ್ರನಿಗೆ ಇನ್ನೊಂದು ಮದುವೆಯನ್ನು ಮಾಡಿಕೊಳ್ಳಲಿಕ್ಕೆ ವಿಜ್ಞಾಪನೆ ಮಾಡಿಕೊಂಡರು. ಆದರೆ ಶ್ರೀರಾಮನು ಅವರ ಮಾತಿಗೆ ಒಪ್ಪಲಿಲ್ಲ. ಕಟ್ಟಕಡೆಗೆ ಅವನು ಸೀತಾದೇವಿಯ ಒಂದು ಬಂಗಾರದ ಮೂರ್ತಿಯನ್ನು ತನ್ನ ಬದಿಯಲ್ಲಿ ಸ್ಥಾಪಿಸಿಕೊಂಡು ಯಜ್ಞವನ್ನು ಪ್ರಾರಂಭ ಮಾಡಿದನು.

ತರುವಾಯ ಅಶ್ವಮೇಧದ ಸಲುವಾಗಿ ಒಂದು ಕುದುರೆಯು ಬಿಡಲ್ಪಟ್ಟಿತು. ಅದರ ಬೆಂಗಾವಲಿಗಾಗಿ ಶ್ರೀರಾಮನ ಸೈನ್ಯವು ದಿಗ್ವಿಜಯದಸಲುವಾಗಿ ಹೊರಟಿತು. ವಾಲ್ಮೀಕಿ ಋಷಿಗಳ ಆಶ್ರಮದ ಸಮೀಪಕ್ಕೆ ಆ ಕುದುರೆಯು ಬರಲು ಲವಕುಶರು ಆ ಕುದುರೆಯನ್ನು ಹಿಡಿದು

ಕಟ್ಟಿ ಹಾಕಿದರು. ಆದರಿಂದ ರಾಮನ ದಂಡಿನೊಡನೆ ಅಲ್ಲಿ ಮಹಾಯುದ್ಧವು ಸಂಭವಿಸಿತು. ವೀರರ ಮಕ್ಕಳು ವೀರರೇ ಆಗಿರುವರಲ್ಲವೆ? ನೋಡ ನೋಡುವಷ್ಟರಲ್ಲಿ ಆ ಇಬ್ಬರು ಕುಮಾರಕರು ಆ ಸೈನ್ಯವನ್ನು ಸೋಲಿಸಿಬಿಟ್ಟರು. ಕಟ್ಟ ಕಡೆಗೆ ಶ್ರೀರಾಮನು ಯುದ್ಧಭೂಮಿಗೆ ಬಂದನು. ಆದರೆ ಅವನು ಯುದ್ಧ ಮಾಡುವದಕ್ಕಿಂತ ಮೊದಲು ವಾಲ್ಮೀಕ ಋಷಿಗಳು ಅಲ್ಲಿಗೆ ಬಂದು ಪರಸ್ಪರ ಹಗೆತನವನ್ನು ಇಲ್ಲ ದಂತೆ ಮಾಡಿದರು. ಮತ್ತು ಸೀತಾದೇವಿಯ ಪಾವಿತ್ರ್ಯದ ಬಗ್ಗೆ ತಮ್ಮ ನಂಬಿಗೆಯನ್ನು ಹೇಳಿದರು. ಅದೇ ಕಾಲಕ್ಕೆ ಸೀತಾದೇವಿಯು ಭೂಮಿಯಲ್ಲಿ ಕಾಣದಂತಾದಳು. ಅರ ಸನೂ ಪ್ರಜೆಗಳೂ ಬಹಳ ಶೋಕವನ್ನು ಮಾಡಿದರು. ಆದರೆ ಯಾರು ಏನು ಮಾಡುವರು?

V

ಒಮ್ಮೆ ಶ್ರೀರಾಮನು ಏಕಾಂತದಲ್ಲಿ ಒಬ್ಬ ಮುನಿಯು ಸಂಗಡ ಮಾತನಾಡುತ್ತ ಕುಳಿತಿದ್ದನು. ಆ ಕಾಲಕ್ಕೆ ಯಾರಾದರೂ ಒಳಗೆ ಬಂದು ತಮ್ಮ ವಿಚಾರಕ್ಕೆ ಭಂಗ ತಂ ದರೆ ಅವರಿಗೆ ಮರಣದ ಶಿಕ್ಷೆಯನ್ನು ವಿಧಿಸತಕ್ಕದ್ದೆಂದು ಹೇಳಿ ಲಕ್ಷ್ಮಣನನ್ನು ಹೊರಗೆ ಬಾಗಿಲಲ್ಲಿ ಕಾಯಲಿಕ್ಕೆ ಕುಳ್ಳಿರಿಸಿದ್ದನು. ಮತ್ತು ಯಾರನ್ನೂ ಒಳಗೆ ಬಿಡಕೂಡ ದೆಂದು ಕಟ್ಟಪ್ಪಣೆಯನ್ನು ಮಾಡಿದ್ದನು. ಲಕ್ಷ್ಮಣನು ಅಣ್ಣನ ಆಜ್ಞೆಯನ್ನು ಶಿರಸಾವಹಿಸಿ ಹೊರಗೆ ಕುಳಿತುಕೊಂ

ಡಿದ್ದನು. ಅಷ್ಟರಲ್ಲಿ ಪ್ರತ್ಯಕ್ಷ ಸಿಟ್ಟಿನ ಅವತಾರವೇ ಎಂದು ಹೆಸರು ಪಡೆದ ದುರ್ವಾಸ ಋಷಿಗಳು ಅಲ್ಲಿಗೆ ಬಂದರು.

ಲಕ್ಷ್ಮಣನು ಅವರನ್ನು ಒಳಗೆ ಬಿಡಲಿಲ್ಲ. ಆಗ ಆ ಋಷಿಗಳು ಇಡೀ ರಾಜ್ಯಕ್ಕೇ ಶಾಪವನ್ನು ಕೊಡುತ್ತೇನೆಂದು ಅಂಜಿಕೆಯನ್ನು ಹಾಕಿದರು. ಆದರಿಂದ ಲಕ್ಷ್ಮಣನು ವಿಚಾರದಲ್ಲಿ ಬಿದ್ದನು. ಏನು ಮಾಡಿಯಾನು? ಕಟ್ಟಕಡೆಗೆ ಎಲ್ಲ ಪರಿಸ್ಥಿತಿಯನ್ನು ವಿಚಾರ ಮಾಡಿ ಒಳಗೆ ಹೋಗಿ ದುರ್ವಾಸರ ಆಗಮನದ ವೃತ್ತಾಂತವನ್ನು ಶ್ರೀರಾಮನಿಗೆ ಅರಿಕೆ ಮಾಡಿಕೊಂಡನು. ಆದರೆ ಶ್ರೀರಾಮನು ಪ್ರತಿಜ್ಞೆ ಮಾಡಿದ ಪ್ರಕಾರ ಲಕ್ಷ್ಮಣನು ಅವರ ಆಲೋಚನೆಗೆ ಭಂಗ ಮಾಡಿದ ತಪ್ಪಿಗೆ ಪಾತ್ರನಾದನು. ಆದದ್ದರಿಂದ ಅವನಿಗೆ ಮರಣದ ಶಿಕ್ಷೆಯನ್ನು ಕೊಡಲಿಕ್ಕೆ ಬೇಕಾಯಿತು. ಆದರೆ ತನ್ನ ಪ್ರಾಣಕ್ಕೆ ಸಮಾನನೂ ಪ್ರೀತಿಯ ತಮ್ಮನೂ ಆದ ಲಕ್ಷ್ಮಣನಿಗೆ ಶಿಕ್ಷೆಯನ್ನು ವಿಧಿಸುವದು ಹೇಗೆ?

ಆಗ ಶ್ರೀರಾಮನು ವಸಿಷ್ಠ ಋಷಿಯ ಆಲೋಚನೆಯನ್ನು ಕೇಳಿಕೊಂಡನು. ಅವರು ಪ್ರಸಂಗೋಚಿತವಾಗಿ ಹೇಳಿದ್ದೇನಂದರೆ:—ಪ್ರಿಯಜನರ ಅಗಲುವಿಕೆಯು ಮರಣದ ಶಿಕ್ಷೆಗೆ ಸಮವಾದದ್ದು. ಆದಕಾರಣ ಈ ಪ್ರಸಂಗದಲ್ಲಿ ನೀನು ಲಕ್ಷ್ಮಣನನ್ನು ತ್ಯಾಗ ಮಾಡತಕ್ಕದ್ದು. ಆ

ಪ್ರಕಾರ ರಾಮನು ಅಂದಿನಿಂದ ಲಕ್ಷ್ಮಣನನ್ನು ಬಿಟ್ಟು ಇರಬೇಕಾಯಿತು.

ಲಕ್ಷ್ಮಣನು ಅಲ್ಲಿಂದ ನೆಟ್ಟಗೆ ಸರಯೂ ನದಿಯ ದಂಡೆಗೆ ಹೋಗಿ, ಆಸನವನ್ನು ಹಾಕಿಕೊಂಡು ಕುಳಿತು ತನ್ನ ದೇಹವನ್ನು ಬಿಟ್ಟನು.

ಈ ದುಃಖಕರವಾದ ಪ್ರಸಂಗದ ತರುವಾಯ, ಸ್ವಲ್ಪ ದಿವಸಗಳಲ್ಲಿಯೇ ಶ್ರೀರಾಮನೂ ಕೂಡ ಶರಯೂನದಿಯ ತೀರದಲ್ಲಿ ದೇಹವನ್ನು ಬಿಟ್ಟುಬಿಟ್ಟನು.

ಶ್ರೀರಾಮನ ಚರಿತ್ರವು ಹಲವು ಬಗೆಯಿಂದ ನಮಗೆ ಮಾದರಿಯಾಗಿರುತ್ತದೆ. ಅವನು ತನ್ನ ಇಡೀ ಆಯುಷ್ಯವನ್ನೆಲ್ಲ ಕರ್ತವ್ಯದಲ್ಲಿಯೇ ಕಳೆದನು. ಚಿಕ್ಕವಯಸ್ಸಿನಲ್ಲಿ ತಂದೆಯ ಕಠೋರವಾದ ಆಜ್ಞೆಯನ್ನು ತಲೆಯಲ್ಲಿ ಅಂತು ತಾಯಿಯಾದ ಕೈಕೇಯಿ ರಾಣಿಯ ವಿಷಯವಾಗಿಯೂ ಪೂಜ್ಯಭಾವವನ್ನು ವ್ಯಕ್ತಪಡಿಸಿದನು. ಆತನ ಕಾಲದಲ್ಲಿ ಅನೇಕಮಂದಿ ಹೆಂಡಿರನ್ನು ಮಾಡಿಕೊಳ್ಳುವ ರೂಢಿಯು ಇದ್ದಾಗ್ಯೂ ಅವನು ಏಕಪತ್ನೀವ್ರತವನ್ನೇ ಪಾಲಿಸಿದನು. ತನ್ನ ವೈರಿಗಳನ್ನು ಸಂಹರಿಸುವ ಕಾಲವು ಒದಗಿದಾಗ ಆಗಾಗ್ಗೆ ಒಳ್ಳೇ ಆಶ್ಚರ್ಯಕರವಾದ ಪರಾಕ್ರಮವನ್ನು ತೋರಿಸಿದನು ರಾಜ್ಯವನ್ನು ಆಳುತ್ತಿರುವಾಗ ಅವನು ತನ್ನ ಸ್ವಂತಕ್ಕೆ ಸಂಬಂಧಿಸಿದ ಸೌಖ್ಯಗಳನ್ನೂ ಪ್ರೇಮವನ್ನೂ

ತ್ಯಾಗ ಮಾಡಿ ಪ್ರಜೆಗಳ ಕಲ್ಯಾಣ ಮಾಡುವದರಲ್ಲಿಯೇ ತತ್ಪರನಾಗಿದ್ದನು. ಇಂದಿಗೂ ಪ್ರಜೆಗಳು ಸುಖವಾಗಿ ಬಾಳುವ ರಾಜ್ಯಗಳಿಗೆ ರಾಮರಾಜ್ಯದ ಉಪಮೆಯು ಕೊಡಲ್ಪಡುವದು; ಇದರಿಂದ ಆತನ ಕಾಲದಲ್ಲಿ ಪ್ರಜೆಗಳು ಎಷ್ಟು ಸುಖವನ್ನು ಅನುಭವಿಸುತ್ತಲಿದ್ದರೆಂಬುದು ತಿಳಿಯುವುದು.

ಭಾರತವರ್ಷದಲ್ಲಿ ಈ ಅತ್ಯಂತ ಶ್ರೇಷ್ಠನಾದ ನರವೀರನನ್ನು ಇಂದಿಗೆ ಮನೆಮನೆಗೆ ಭಕ್ತಿಯಿಂದ ಪೂಜಿಸುತ್ತಿರುವರು. ಮತ್ತು ಕೋಟ್ಯವಧಿ ಜನರು ಶ್ರೀರಾಮನನ್ನು ತಮ್ಮ ಅತ್ಯಂತ ಶ್ರೇಷ್ಠವಾದ ಪ್ರೀತಿಯ ಇಷ್ಟದೇವರೆಂದು ಭಾವಿಸುತ್ತಿರುವರು.

ಶ್ರೀರಾಮನಿಗೂ ಸೀತಾದೇವಿಗೂ ಪುನಃಪುನಃ ನಮ್ಮ ಭಕ್ತಿಪೂರ್ವಕವಾದ ವಂದನೆಗಳು ಇರಲಿ.

ಸಂಪೂರ್ಣ



## ಇದೇ ಲೇಖಕರ ಬೇರೆ ~

೧. ವೇಣ

೨. ಇ

೩. ಮುಗ

(ಗುಪ್

೧ನೇ ೨ನೇ ... ಕವು
ಶ್ರೀ. ವೆ. ತಿ. ... ಸಿಗೂ
ದೊರೆಯುವವು.

ಮೀನಭ
ಡಿ ಧಾ ... ರಾಡ

ಇದನ್ನು ಖಂಡೋ ರಾಮಚಂದ್ರ ಭಿಸೆ, ಇವರು ಧಾರವಾಡ ಕರ್ನಾಟಕ ಪ್ರಿಂಟಿಂಗ
ವರ್ಕ್ಸದಲ್ಲಿ ಮುದ್ರಿಸಿದರು ಮತ್ತು ಟಿ. ಎನ್. ಅಮೀನಭಾವಿ, ಪೆನ್‌ಶನರ
ಮಾಸ್ತರ ಇವರು ಧಾರವಾಡದಲ್ಲಿ ಮಾಳಮಡ್ಡಿಯಲ್ಲಿರುವ ತಮ್ಮ
ಮನೆಯಲ್ಲಿ ಪ್ರಸಿದ್ಧಮಾಡಿದರು. ೬೩೬೪-೩೬-೫೦೦

